ಬೆಲೆ: ಎರಡು ಆಣೆ

ವರ್ಗಣಿ ದರ
(ಅಂಚೆವೆಚ್ಚ ಸೇರಿ)
ವರ್ಷಕ್ಕೆ ರೂ. ೬-೮-೦
೬ ತಿಂಗಳಿಗೆ ,, ೩-೮-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
*
AUG. 5
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ] ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ [ Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೫—೮—೧೯೪೬ [ ಸಂಚಿಕೆ ೨೮

# ಗೋಮಾಂತಕದಲ್ಲಿ ಸ್ವಾತಂತ್ರ್ಯದ ಬಿರುಗಾಳಿ

## ೪೦೦ ವರ್ಷಗಳ ದಬ್ಬಾಳಿಕೆಯ ನಂತರ ಅಹಿಂಸಾ ಶಕ್ತಿಯ ನೆರವಿನಿಂದ ಕ್ರಾಂತಿಯುಗದ ಪ್ರಾರಂಭ: ಗೋಮಾಂತಕರ ರಾಜಕೀಯ, ಆರ್ಥಿಕ, ಶೈಕ್ಷಣಿಕ ದುರ್ದಶೆ




ಗೋಮಾಂತಕ

ಕರಡಗೆಯೊಳಗೊಂದು ಕರಡಗೆಯಂತೆ ವಿಶಾಲ ಹಿಂದುಸ್ತಾನದಲ್ಲಿ ನಡೆದ ಬ್ರಿಟಿಶ ಸತ್ತೆಯ ಆಶ್ರಯದಲ್ಲಿ ಪುಟ್ಟ ಗೋಮಾಂತಕದಲ್ಲಿ ಪೋರ್ತುಗೀಸರು ನಡೆಸುತ್ತಿದ್ದ ಆಳಿಕೆ ಈ ದೇಶದ ರಾಜಕಾರಣಿಗಳ ಲಕ್ಷ್ಯದಿಂದ ತೀರ ಹೊರಗಾಗಿತ್ತು. ಆದರೆ ಈಗ ಹಲ ವಾರಗಳ ಹಿಂದೆ ಆಕಸ್ಮಾತ್ತಾಗಿ ಗೋವೆಯ ಹೆಸರು ದೇಶದ ಪ್ರಮುಖ ಪತ್ರಿಕೆಗಳ ಹಿರಿಬರೆಹದ ವಸ್ತುವಾಗುವ ಮಟ್ಟಕ್ಕೆ ನೆಗೆಯಿತು. ೪೦೦ ವರ್ಷಗಳ ಘನ ನಿದ್ರೆಯ ನಂತರ ಈಗ ಈ ಅಭಿನವ ಕುಂಭಕರ್ಣನು ಎದ್ದು ನಿಂತಿದ್ದಾನೆ. ಮಹಾತ್ಮಾ ಗಾಂಧಿ, ಪಂ. ಜವಾಹರಲಾಲರಂಥ ಹಿರಿಯ ಮುಂದಾಳುಗಳ ಕಣ್ಣು ಕೂಡ ಅತ್ತ ಹೊರಳಿವೆ. ಜನರೆಲ್ಲರೂ ಗೋವೆಯನ್ನು ಅರಿತವರಂತೆ ಮಾತಾಡುತ್ತಿದ್ದಾರೆ. ಆದರೆ ಅದನ್ನು ನಿಜವಾಗಿ ಅರಿತವರು ಕಡಿಮೆ. ಗೋವೆಯ ಸ್ಥೂಲ ಪರಿಚಯ, ಅದರ ರಾಜಕಾರಣ, ಆ ರಾಜಕಾರಣದ ಬೇರುಗಳು ಇವುಗಳ ಜಾಡು ತೋರಿಸುವದು ಈ ಲೇಖದ ಉದ್ದೇಶ.

### ಲೋಹಿಯಾರ ಪುಣ್ಯ

ಗೋವೆಯನ್ನು ಕುರಿತು ಬಲ್ಲವರಂತೆ ಆಡುವವರು ಅದರ ಒಂದೇ ಮೈಯನ್ನು ಕಂಡವರು. ದಕ್ಷಿಣದ ಕಾಶ್ಮೀರವೆಂದು, ಪ್ರಕೃತಿ ಸೌಂದರ್ಯದ ಬೀಡೆಂದು, ವಿಲಾಸಿಗಳ ನಂದನವನವೆಂದು ಅಲ್ಲಿಗೆ ಯಾತ್ರೆ ಮಾಡುವವರಿದ್ದಾರೆ. ಹಲ ವರ್ಷಗಳ ಅಜ್ಞಾತವಾಸ ಮತ್ತು ಸೆರೆಮನೆಯ ಆತಿಥ್ಯದ ನಂತರ ಹೊರಬಂದ ಕಾಂಗ್ರೆಸ್ ಸಮಾಜವಾದಿ ಅಗ್ನಿಭಕ್ಷಕ ಡಾ. ರಾಮ ಮನೋಹರ ಲೋಹಿಯಾ ಕೂಡ ವಿಶ್ರಾಂತಿಗಾಗಿ, ಜರ್ಮನಿಯಲ್ಲಿ ತಮ್ಮ ಸಹಪಾಠಿಗಳಾಗಿದ್ದ ಡಾ. ಮೆನಜೀಸರ ಆಮಂತ್ರಣದ ಮೇರೆಗೆ, ಸುಂದರ ಗೋಮಾಂತಕಕ್ಕೆ ಹೋದವರು. ಆದರೆ ಗೋಮಾಂತಕ ರಾಜಕಾರಣದ ಬಗರಿಯನ್ನು ತಿರ್ರಿ ತಿರುಗಿಸಿ ಬಿಡುವದು ಅವರ ಹಣೆಯಲ್ಲಿ ಬರೆದ ಪುಣ್ಯವಾಗಿತ್ತು. ಈ ಸುಂದರ ರಾಜ್ಯದಲ್ಲಿ ಹಬ್ಬಿದ ಕರಾಳ ದಬ್ಬಾಳಿಕೆ, ಸಭೆ-ಮೆರವಣಿಗೆ-ಸಂಘ ಸ್ವಾತಂತ್ರ್ಯಗಳ ಅಭಾವಗಳನ್ನು ನೋಡಿ, ಮತ್ತು ಅಖಿಲ ಹಿಂದುಸ್ತಾನದಲ್ಲಿ ಬೀಸಿದ ಸ್ವಾತಂತ್ರ್ಯದ ಬಿರುಗಾಳಿ ಬಡಿದು ಎಚ್ಚತ್ತಿದ್ದರೂ ಮಿಸುಕಾಡಲೆಡೆಯಿಲ್ಲದಲ್ಲಿ ಹೇಗೆ ಕೈಕಾಲು ಕೊಡಹಬೇಕೆಂದರಿಯದ ಗೋಮಾಂತಕ ಸ್ವಾತಂತ್ರ್ಯಪ್ರಿಯರ ಪಾಡು ನೋಡಿ ಲೋಹಿಯಾರು ವಿಶ್ರಾಂತಿಯನ್ನು ಮರೆತು ಕಣಕ್ಕಿಳಿದರು. ಪೋರ್ತುಗೀಸ ಸರಕಾರದ ಭಾಷಣ ಪ್ರತಿಬಂಧವನ್ನು ಮುರಿಯುವ ತಮ್ಮ ನಿರ್ಧಾರವನ್ನು ಪ್ರಕಟಗೊಳಿಸಿ ಬಂದುದನ್ನು ಅನುಭವಿಸಲು ಸಿದ್ಧರಾದ ಹತ್ತು ಜನ ಯುವಕರೊಡನೆ ಸಭೆ ಜರಗಿಸುವ ಏರ್ಪಾಡು ಮಾಡಿದರು. ಬೆಚ್ಚಿಬಿದ್ದ ಸರಕಾರದವರು ಅವರು ಸಭಾಸ್ಥಾನ ಮುಟ್ಟುವದರೊಳಗೆ ಅವರ ಮೋಟಾರು ತರುಬಿ ಅವರನ್ನು ಬಿಟ್ಟು, ವಿಚಿತ್ರವಾಗಿ, ಮೋಟಾರನ್ನು ಹಿಡಿದರು. ಲೋಹಿಯಾರು ಬಾಡಿಗೆಯ ಬಗಿಯಲ್ಲಿ ಮುಂದೆ ಸಾಗುತ್ತಲೆ ಮೂಢ ಅಧಿಕಾರಿಗಳಿಗೆ ತಮ್ಮ ಬುದ್ಧಿಯ ಮಟ್ಟು ತಿಳಿದಿರಬೇಕು. ಆ ಮೇಲೆ ಅವರು ಲೋಹಿಯಾರನ್ನೂ ಅವರ ಸಂಗಡಿಗನೊಬ್ಬನನ್ನೂ ಹಿಡಿದು ಕಚೇರಿಗೊಯ್ದರು. ಅಷ್ಟೇ ಸಾಕಾಯಿತು "ಜಯ ಹಿಂದ!" "ಜಯ ಗೋಮಾಂತಕ!" "ಕ್ವಿಟ ಗೋವಾ!" (ಗೋವಾದಿಂದ ತೊಲಗಿರಿ!) ಎಂಬ ಘೋಷಣೆಗಳಿಂದ ಅವರನ್ನು ಬೀಳ್ಕೊಟ್ಟ ಜನಸ್ತೋಮಕ್ಕೆ ಅಹಿಂಸಾತ್ಮಕ ಬಹಿರಂಗ ಹೋರಾಟದ ಸಂಜೀವಿನಿ ಕಡ್ಡಿ ದೊರೆತಂತಾಯಿತು. ಬಂಧಿಸಿದ ಲೋಹಿಯಾರನ್ನು ರಾಜಧಾನಿ ಪಣಜಿಗೆ ತಂದು ಸೆರೆಮನೆಯಲ್ಲಿಟ್ಟು ಪ್ರಾಣಹರಣದ ಬೆದರಿಕೆಯನ್ನು ತೋರಿಸಿದರೂ ಆ ಕ್ರಾಂತಿಕಾರನು ಜಗ್ಗದಿರಲು ಏನೂ ತೋಚದೆ ಕೊನೆಗೆ ಬ್ರಿಟಿಶಹದ್ದಿಯಲ್ಲಿ ತಂದು ಕ್ಯಾಸಲ್‌ರಾಕದಲ್ಲಿ ಅವರನ್ನು ಬಿಟ್ಟುಬಿಟ್ಟ ಪೋರ್ತುಗೀಸ ಸರಕಾರಕ್ಕೆ ಈಗ ಈ ಹೊಸ ಪದ್ಧತಿಯ ಹೋರಾಟವನ್ನು ಎದುರಿಸುವದೇ ಸಮಸ್ಯೆಯಾಗಿಬಿಟ್ಟಿದೆ. ಡಾ. ಲೋಹಿಯಾರು ಕೆಡಹಿ ಹೋದ ಕಿಡಿ ಹೊತ್ತಿಕೊಂಡು ಉರಿಯಹತ್ತಿತು. ಬಸ್ಸಿನಲ್ಲಿ ಹೋಗುತ್ತಿದ್ದ ವತ್ಸಲಾ ಕೀರ್ತನೆಯೆಂಬ ಮಹಿಳೆ ಸ್ವಾತಂತ್ರ್ಯದ ಗಾಳಿಯಿಂದ ಮೈನವಿರೆದ್ದು "ಜಯ ಹಿಂದ!" ಎಂದು ಘೋಷಿಸಿ ಬಂಧಿಸಲ್ಪಟ್ಟಳು. ಸಂಜೆ ಅವಳನ್ನು ಬಿಡುಗಡೆ ಮಾಡಬೇಕಾಯಿತು. ಪ್ರಭಾತಫೇರಿಗಳು ಮಡಗಾವ, ಮ್ಹಾಪಸೆ, ಫೋಂಡೆ ಮೊದಲಾದ ನಗರಗಳಲ್ಲಿ ನಡೆದವು; ಬಂಧನಗಳಾದವು. ಜುಲೈ ೧೮ ಸ್ವಾತಂತ್ರ್ಯದ ಹೋರಾಟದ ಮೊದಲ ದಿನವೆಂದು ಆಚರಿಸಲ್ಪಟ್ಟಿತು. ಲಲಿತಾ ಕಂಟಕ ಎಂಬ ಯುವತಿ ಪ್ರಭಾತಫೇರಿಯ ಮುಂದಾಳಾಗಿ ತ್ರಿವರ್ಣ ಧ್ವಜದೊಡನೆ ಹೊರಟಿದ್ದಾಗ ಪೋಲೀಸ ಅಧಿಕಾರಿಗಳು ಅವಳನ್ನು ನಾಚಿಕೆಗೇಡಿಗಳಂತೆ ಹಿಂಸಿಸಿ ಸೀರೆ ಹರಿದು ಧ್ವಜ ಕಸಿದುಕೊಂಡರು. ಇನ್ನೊಂದೆಡೆ ೫ ಜನ ಪ್ರಭಾತಫೇರಿಗಾರರನ್ನು ಬಂಧಿಸಿ "ಜಯ ಪೋರ್ತುಗಾಲ" ಎಂದು ಅವರಿಂದ ಘೋಷಣೆ ಮಾಡಿಸಲಾರದೆ ಅಧಿಕಾರಿಗಳು ಅವರನ್ನು ಮೈಮುರಿ ಥಳಿಸಿದರು. ಆನಂದ ಕುರಾಡೆ ಎಂಬ ೧೭ ವರ್ಷದ ಕಿಶೋರನನ್ನು ಕಚೇರಿಗೆಳೆದೊಯ್ದು "ಪೋರ್ತುಗೀಸ ಸರಕಾರ ಚಿರಾಯುವಾಗಲಿ!" ಎಂದು ಅವನಿಂದ ಅನ್ನಿಸಲು ಸಾಧ್ಯವಾಗದಿರಲು ಅವನ ಬಾಯಿಗೆ ಬಂದೂಕಿನಿಂದ ತಿವಿದು ಗಾಯ ಮಾಡಿದರು. ಆದರೆ ಸ್ವಾತಂತ್ರ್ಯದಿಂದ ಉದ್ದೀಪಿತನಾದ ಆ ಕಿಶೋರನು ಕೊನೆಗೂ ತಲೆವಾಗಲಿಲ್ಲ.

### ಸರಕಾರ ಕಂಗಾಲಾಗಿದೆ

ಅಹಿಂಸಾತ್ಮಕ ಚಳವಳಿಯನ್ನು ಕಂಡರಿಯದ ಸರಕಾರಕ್ಕೆ ಅದನ್ನು ಬಗ್ಗು ಬಡಿಯುವ ಮಾರ್ಗವೇ ತಿಳಿಯದಾಗಿದೆ. ಲೋಹಿಯಾರು ಬಂದು ಹೋದ ನಂತರ ಅದು ಗೋಮಾಂತಕದಲ್ಲಿ ಭಾಷಣ ಸ್ವಾತಂತ್ರ್ಯವಿದೆಯೆಂದು ಅನಧಿಕೃತ ಹೇಳಿಕೆ ಹೊರಡಿಸಿತು. ಆದರೆ ಇದು ಬರಿ ಕಾಗದದಲ್ಲಿ ಉಳಿದಿದೆ. ಬಂದೂಕು, ಸೆರೆಮನೆಗಳಿಗೆ ಸೊಪ್ಪುಹಾಕದ ಸತ್ಯಾಗ್ರಹಿಗಳನ್ನು ಏನು ಮಾಡಬೇಕೆಂದು ಗೊತ್ತಾಗದೆ ಅದೀಗ ಚಳವಳಿಗಾರರನ್ನು ಹೊಡೆದು ಬಿಟ್ಟುಬಿಡುವ ಹುಚ್ಚು ಉಪಾಯವನ್ನು ಕೈಕೊಂಡಿದೆ. ಚಳವಳಿ ಆರಂಭವಾಗಿ ಈವರೆಗೆ ೫೦—೬೦ ಜನರನ್ನು ಬಂಧಿಸಿರಬಹುದಾದರೂ ತ್ರಿಸ್ತಾ ಬ್ರಗಾಂಜಾ ಕುನ್ಹಾ, ಭಾಸ್ಕರ ಜಾಟಕರ, ಉಪೇಂದ್ರ ತಾಲಾಸಲಿಕರ, ಶ್ರೀಕಾಂತ ಸಾವಕಾರ, ಪ್ರಭಾಕರ ಹಾಲ, ಶ್ರೀಪಾದ ಧೋಪೇಶ್ವರ, ಮತ್ತು ಧೋಂಡ ಇವರನ್ನುಳಿದು ಇತರರನ್ನು ಬಿಟ್ಟುಬಿಡಲಾಗಿದೆ. ಸಭೆ ಮೆರವಣಿಗೆ ಪ್ರತಿಬಂಧ ಮುರಿದವರಿಗೆ ಆರೇ ತಿಂಗಳು ಶಿಕ್ಷೆ ಕಾಯದೆಯಲ್ಲಿ ಹೇಳಲ್ಪಟ್ಟಿದ್ದರೂ ಈ ಮೇಲಿನವರ ಮೇಲೆ ರಾಜದ್ರೋಹದ ಆರೋಪ ಹೊರಿಸಲಾಗಿದೆ. ಜಮೀನದಾರರಾಗಿದ್ದರೂ ಸ್ವಾತಂತ್ರ್ಯಪ್ರೇಮಿಗಳೂ ಧೀರೋದಾತ್ತರೂ ಆದ ತ್ರಿಸ್ತಾ ಬ್ರಗಾಂಜಾ ಕುನ್ಹಾ ಅವರಿಗೆ ಮೊನ್ನೆ ಮೊನ್ನೆ ಸೈನ್ಯ ನ್ಯಾಯಾಲಯದವರು ಎಂಟು ವರ್ಷ ಗಡಿಪಾರಿನ ಶಿಕ್ಷೆ ವಿಧಿಸಿದ್ದಾರೆ. ಉಳಿದವರೂ ತಮ್ಮ ವಿಧಿಯನ್ನು ನೋಡುತ್ತಿದ್ದಾರೆ. ಇನ್ನು ಅನೇಕರು ಸರಕಾರದ ಕೈಗೆ ಸಿಕ್ಕದಿದ್ದರೂ ಅವರ ಮೇಲೆ ಕಟ್ಟಳೆಗಳು ನಡೆದಿವೆ.

ಹೀಗೆ ಬಗರಿ ತಿರುಗತೊಡಗಿದೆ. ರಭಸದಿಂದಲೇ ತಿರುಗತೊಡಗಿದೆ. ಸರಕಾರ ಮೂರ್ಖ ದಬ್ಬಾಳಿಕೆ ಪ್ರಾರಂಭಿಸುವದರಿಂದ ಈ ಚಳವಳಿ ಸಪ್ಪೆತನವಾಗಿ ಉಳಿಯದಿರದೆಂದು ನಂಬಬಹುದು. ಏಕೆಂದರೆ ಚಳವಳಿ ದಬ್ಬಾಳಿಕೆಯನ್ನೇ ನುಂಗಿ ಬೆಳೆಯುವ ರಕ್ಕಸ. ಆದರೆ ಇದಲ್ಲ ಇಂದು ನಿನ್ನಿನ ಕಥೆ. ಚಳವಳಿ ಹಿನ್ನೆಲೆಯಿಲ್ಲದೆ ಹುಟ್ಟಲಾರದು. ಆ ಹಿನ್ನಲೆಯೇನು? ನೋಡೋಣ.

### ಭೂಗೋಲ, ಇತಿಹಾಸ

ಉತ್ತರದಲ್ಲಿ ರತ್ನಾಗಿರಿ ಜಿಲ್ಲೆ, ಸಾವಂತವಾಡಿ ಸಂಸ್ಥಾನ, ಪೂರ್ವದಲ್ಲಿ ಬೆಳಗಾವಿ, ಆಗ್ನೇಯ ದಕ್ಷಿಣಗಳಲ್ಲಿ ಕಾರವಾರ ಜಿಲ್ಲೆಗಳಿಂದ ಸುತ್ತುವರಿಯಲ್ಪಟ್ಟಿರುವ, ಬ್ರಿಟಿಶ ಸಾಮ್ರಾಜ್ಯದಲ್ಲಿರುವ ಪೋರ್ತುಗೀಸ ದ್ವೀಪವೆನ್ನಬಹುದಾದ ಗೋವೆಯ ವಿಸ್ತಾರ ಕಾರವಾರ ಜಿಲ್ಲೆಗಿಂತಲೂ ಕಡಿಮೆಯಾಗಿದೆ. ಅದು ಹಿಂದುಸ್ತಾನದ ಪಶ್ಚಿಮ ಕರಾವಳಿಯಲ್ಲಿ ದಕ್ಷಿಣೋತ್ತರ ೬೮ ಮೈಲು, ಪೂರ್ವಪಶ್ಚಿಮ ೩೭ ಮೈಲು ಹಬ್ಬಿದೆ. ಕಾರವಾರದಂತೆ ಅಡವಿ ತುಂಬಿದ ಪ್ರದೇಶವಿದು. ಜನಸಂಖ್ಯೆ ೫ ಲಕ್ಷ. ಅವರಲ್ಲಿ ಅರ್ಧಕ್ಕಿಂತ ಸ್ವಲ್ಪ ಹೆಚ್ಚು ಜನ ಹಿಂದೂಗಳು. ಉಳಿದವರು ಕ್ರಿಶ್ಚನ್ನರು. ೧೯೨೮ ರ ವರೆಗೂ ಕ್ರಿಶ್ಚನ್ನರೇ ಸ್ವಲ್ಪ ಮಟ್ಟಿಗೆ ಬಹುಸಂಖ್ಯಾಕರಾಗಿದ್ದರು. ಆದರೆ ಆ ವರ್ಷ ೧೦೦೦೦ ಕ್ರಿಶ್ಚನ್ನರು ಶುದ್ಧಿ ಹೊಂದಿ ಪುನಃ ಹಿಂದುಗಳಾದುದರಿಂದ ತಕ್ಕಡಿ ಮತ್ತೆ ಇತ್ತ ಇಳಿಯಿತು.

ಬಹಮನಿ ಮತ್ತು ಹಿಂದೂ ರಾಜರ ನಡುವೆ ಕೈಬದಲಿಸುತ್ತಿದ್ದ ಗೋಮಾಂತಕದಲ್ಲಿ ಪೋರ್ತುಗೀಜ ಸಾಮ್ರಾಜ್ಯವಾದಿಗಳು ೧೫೧೦ ರಲ್ಲಿ ಪ್ರವೇಶಿಸಿ ತೀಸವಾಡಿ ತಾಲೂಕನ್ನು ಗೆದ್ದುಕೊಂಡರು. ಆ ಮೇಲೆ ಸುತ್ತಮುತ್ತ ಕಾಲು ಚಾಚಿ ೧೭೮೮ ರಷ್ಟು ಹೊತ್ತಿಗೆ ಈಗಿನ ಗೋಮಾಂತಕವನ್ನು ಪೂರ್ಣವಾಗಿ ಜಯಿಸಿಕೊಂಡರು. ಸಾಮ್ರಾಜ್ಯ ವಿಸ್ತರಣೆಯಲ್ಲಿ ತಮ್ಮ ಬ್ರಿಟಿಶ ಪ್ರತಿಸ್ಪರ್ಧಿಗಳನ್ನು ಮೀರಿಸಲಾರದೆ ಹೋದರೂ ಅವರ ಕೃಪಾಛತ್ರದಲ್ಲಿ ಇಷ್ಟೊಂದು ನೆಲೆಯನ್ನುಳಿಸಿಕೊಂಡರು. ಇದೇ ಆಡಳಿತಗೊಳಪಟ್ಟು ಗುಜರಾತದ ದೀವ ಮತ್ತು ದಮಣ ಹಾಗು ಮಲಬಾರ ಕರಾವಳಿಯಲ್ಲಿರುವ ಅಂಗದಿವಾ, ಸಾವೊಗೆಓರ್ಜ, ಮಾರ್ಸೆಗಾಸ ದ್ವೀಪಗಳು ಪೋರ್ತುಗೀಸರ ವಶದಲ್ಲಿವೆ.

(೬ನೇ ಪುಟ ನೋಡಿರಿ)

# ಜ್ಯೇಷ್ಠಮಾಸದ ಕತೆಗಳು . . . .

( ಕಲಾಮಂಟಪ ಬೆಳಗಾವಿ )

ಕನ್ನಡದಲ್ಲಿ ಸಣ್ಣ ಕತೆಗಳು ಸಾಕಷ್ಟು ಬೆಳೆಯುತ್ತವೆ. ಎಂಬುದಕ್ಕೆ ಜೇಷ್ಠ ಮಾಸದ ೫೬ ಕತೆಗಳು ಸಾಕ್ಷ್ಯವಾಗಿವೆ. ಆದರೆ ಹಣ್ಣುಕಾಯಿಗಿಂತ ಕಸುಗಾಯಿಗಳೇ ಹೆಚ್ಚಾಗಿ ಕಂಡುಬರುವವು ಕಸುಗಾಯಿ ನಾಳೆಗೆ ಹಣ್ಣಾಗಬಹುದು. ಕತೆಗಾರರಿಗೆ ಪ್ರಪಂಚಾನುಭವವು ಹೆಚ್ಚಿದಷ್ಟು ಒಳ್ಳೆಯದೆಂದು ಹೇಳುವ ಮಾತು ಅಪ್ರಾಸಂಗಿಕವೆನಿಸದು.

ಇಂಗ್ಲೀಷ ಸಾಹಿತ್ಯದಲ್ಲಿಯ ವಿಲಿಯಂಪ್ಲೋಮರ, ಡಿ ಎಚ್. ಲಾರೆನ್ಸ, ಸೋಮಸೆಟ್ಟ, ಹಕ್ಸ್ಲೆ ಇವರ ಸಂಶಮಾನ ಮನ್ನಣೆಯ ಪೀಠವನ್ನಲಂಕರಿಸಿದ ಎಲಿಜಾಬೆಥ ಬೋಬಿನ್ನಳು ಸಣ್ಣಕತೆ ಮತ್ತು ಕತೆಗಾರರ ಸಂಬಂಧ ಒಂದೆರಡು ಉತ್ಕೃಷ್ಟ ಮಾತುಗಳನ್ನು ಹೇಳಿರುವಳು. ಅವುಗಳನ್ನು ಗಮನಿಸಬೇಕು—ಬುದ್ಧಿಗಮ್ಯ ತೊಡಕುಗಳು ಕತೆಯಲ್ಲಿ ವಿರಳ. ಉಳಿದ ಸಂಗತಿಗಳ ಸಿಬಗಟ್ಟಿದಂತೆ, ಕವಿತೆಯ ಕಲ್ಪಕತೆಯಂತೆ ಕತೆಯಲ್ಲಿ ಸಾಮಾನ್ಯರಿಗೂ ತಿಳಿಯುವಂತೆ ಒಂದು ಸೂಕ್ಷ್ಮ ಸುಂದರ ಘಟನೆಯಿರುವದು. ಅದು ಕಾದಂಬರಿಯಂತೆ ವಿಶಾಲವಾಗಿ ಹಬ್ಬಿನಿಂತಿರುವದಿಲ್ಲ. ಕತೆಗಾರನು-ಕವಿಯಂತೆ (ತಾನು ಕವಿಯಲ್ಲದಿದ್ದರೂ) ವಸ್ತುವಿನಮೇಲೆ ಅವಲಂಬಿಸಿರುವನು. ಕೆಲವಿಚಾರ ಅವನನ್ನು ಅಂಟುವವು. ತಾನಾಗಿ ಹುಡುಕುವದಿಲ್ಲ. ತೋರೆಗಣ್ಣಿಗೆ ಕಂಡ ಸಂಗತಿಯು ಒಳಗಣ್ಣಿನಲ್ಲಿ ಇಳಿದು ನಿಲ್ಲುವದು. ಮಹತ್ಪೂರ್ಣವಾದ ಕಣಸಿನ ಗೊಂಬೆಯ ಸುಳಿದಾಟವೇ ಕತೆಯ ವಸ್ತು. ಅಥವಾ The what-has-happened is the story ಕತೆಯ ತಂತ್ರ ಬಹುಮುಖದ್ದು. ಪ್ರತಿಯೊಂದು ಕತೆಯು ಹೊಸ ತಂತ್ರವನ್ನು ಅವಲಂಬಿಸಿರುವದು. ಮತ್ತೆ ಮುಂದೆ ಹೇಳಿದು "ಕೆಲವರು ವಸ್ತು-Plot-ಗಿಂತಲೂ ಸನ್ನಿವೇಶ—Atmosphere- ಮಹತ್ವದ್ದೆನ್ನುವರು. ಆದರೆ More and more I disagree with them. Atmosphere should be given off by the plot, as smoke is given off by the fire. All the good Maupassant stories give off in the sence." ಈ ಮಾತುಗಳನ್ನು ಕನ್ನಡದಲ್ಲಿಯ ಉದಿತೋದಿತ ಕತೆಗಾರರು ಗಮನಿಸಬೇಕು.

## ಅನುವಾದ

೫೬ ಕತೆಗಳಲ್ಲಿ ಅನುವಾದ ಕತೆಗಳು ಏಳು. ಆದರೆ ಗಣೇಶ ಚಿಪಳೂಣಕರರು ಈ ಮೊದಲೇ ಪುಸ್ತಕದಲ್ಲಿ ಮುದ್ರಿಸಿ ಪ್ರಸಿದ್ಧಿಗೊಂಡ ರವೀಂದ್ರರ " ಆ ನದೀ ತೀರದಲ್ಲಿ'' ಎಂಬ ಕತೆಯನ್ನು ನವಯುಗ ಮತ್ತು ಅಂತರಂಗದಲ್ಲಿ ಏಕೆ ಪ್ರಕಟಿಸಿದರೋ ?

## ಪ್ರೇಮ-ಕಾಮ

ಉಮ್ಮತ್ತಾಲರ ಬೇಡದ ಮಗು, ಮೂಲ್ಕಿಯವರ ಹಾ! ಏನದು ಪ್ರಮಾದ, ಎಸ್. ಎಚ್. ಕೊಳ್ಳೆ ಬೈಲರ ಮದುವೆ ಹೋಮ. ಕೃ. ಹ. ಕೊಲ್ಹಾರರ ಯಾರಿವನು ಸ್ವೈರ-ಕಾಮವೃತ್ತಿಯ ಕತೆಗಳು. ಒಂದರಲ್ಲಿ ನಲ್ಲ-ನಲ್ಲೆಯರ ಸ್ವಚ್ಛಂದ ಕಾಮಜೀವನಕ್ಕೆ ಮುಗುಳೊಡೆದಂತೆ ಕೂಸಾಗಿ ಬೀದಿಗೆ ಎಸೆಯಲು ಹೇಸರು. ಉಳಿದವುಗಳಲ್ಲಿ-ನಾಗಿ ಅರ್ಚಕನ ಬಲೆಗೆ ಬಿದ್ದು ಸಾಯುವದು, ಭಾಸ್ಕರನು ವಿನೋದಿನಿಯನ್ನು ಮೋಸಗೊಳಿಸಿ ತಂಗಿ—ನಲಿನಿಯನ್ನು ಮದುವೆಯಾಗುವದು. ಸೆಟ್ಟರು ದ್ಯಾಮನ ಹೆಂಡತಿಯನ್ನು ಭ್ರಷ್ಟಗೊಳಿಸಿ ಅವನ ಬಂಗಾರದಂತಹ ಬಾಳಿನಲ್ಲಿ ಮಣ್ಣು ಹೊಯ್ಯುವದು, ಪುರುಷನ ಸ್ವಚ್ಛಂದ ಚಿತ್ರಗಳೇ! ಆದರೆ ಚಿತ್ರದ ಹಿನ್ನೆಲೆಗೆ ಇನ್ನಷ್ಟು ಬಣ್ಣ ಬೇಕು. ಉಳಿದ ಕಲಾವಿದ, ಕೃಷ್ಣದ ಪರಮಾವಧಿ, ಪ್ಯಾರಿಮಾ, ಏಕಜೀವ, ಮಾವನ ಮನೆಯಲ್ಲಿ, ತುಚ್ಛ ಹರೆಯದ ಸರಸ ಚಿತ್ರಗಳು. ಕ. ರಾ. ಸು. ರ ಸಹಗಮನದಲ್ಲಿಯ ಪ್ರೇಮ ಅದ್ಭುತವಾದುದು. ವಿಧಿಯು ಆಕಸ್ಮಿಕದಿಂದ ಅವರನ್ನು ಎಂದೂ ಕೂಡದಂತೆ ಅಗಲಿಸಿಬಿಟ್ಟಿತು.

ಆದರೆ ವೀರಭದ್ರ ಮ್ಯಾಗೇರಿಯವರ ಪರಿವರ್ತನೆಯಲ್ಲಿಯ ಕಾಮಜೀವನ ಶುದ್ಧವಾದುದು—

ಪಾರ್ವತಿ ರಮೇಶನ ವೇಶ್ಯೆ, ರಮೇಶನ ಅಲ್ಪ ಸಂಬಳದಿಂದ ತೊಳಲಾಡುವರು. ರಮೇಶನು ತನ್ನ ಬೆನ್ನು ಹತ್ತಿದ ದುಡ್ಡಿನ ಅಭಾವದ ಭೂತವನ್ನು ಬಿಡಿಸದಾದ. ಉಪವಾಸಕ್ಕೆ ಬರುವರು. ಮೇಲೆ ಮನೆಯ ಬಾಡಿಗೆಯವನ ಕಾಟ. ಈ ಚಿಂತೆ-ಸಂಕಟಗಳ ಸುಳಿಗೆ ಸಿಕ್ಕು ಪಾರ್ವತಿಯು ಹೊಸ ಗಿರಾಕಿಯನ್ನು ಹುಡಕಬಯಸುವಳು. ರಮೇಶನು ಅನುಮತಿಯನ್ನಿತ್ತ ದುರ್ದೈವಿ ರಮೇಶ ಇಂಥ ಅಸಹಾಯ ಸ್ಥಿತಿಗೆ ಬಂದು ನಿಂತಿರುವ! ಪಾರ್ವತಿ ಕರೆದಳು. ಗಿರಾಕಿ ಬಂದ. ಆದರೆ "ನಿಮಗೆ ಇಲ್ಲಿ ಸ್ಥಳವಿಲ್ಲ;'' ಉತ್ತರ. ವೇಶ್ಯೆ ಇದ್ದರೂ ಎಂಥ ಪ್ರೇಮ! ಎಂಥ ಭಕ್ತಿ!

## ಧ್ಯೇಯವಾದಿ

ಚೆನ್ನಕೂಟರ ಸೌಂದರ್ಯವೆಂಬುದು, ವಿಮಲಾ ಕಟ್ಟಿಯವರ ಬೇಸ್ತು ಕತೆಗಳು H. G Wells ರ Black Man ದಾಟಿಯವೆನಿಸಿದರೂ ಬೋಧಪ್ರದವಾದವು. ಉಳಿದ ಚಿನ್ನಿ, ಕೃತಜ್ಞತೆಯಿಂದ ಏಳಿಗೆ, ಪರಿವರ್ತನೆ (ಪ್ರಜಾಮತ) ಮಲ್ಲವ್ವನ ಮುಕ್ತಿ, ವಾಸುನ ವನವಾಸ, ಚಿನ್ನದ ಓಲೆ, ಶಿವನೇ ಗತಿ, ಹೊಟ್ಟೆಗಾಗಿ, ಈ ಚಿಂತೆ ನನಗೂ ಇದೆ. ಬಡವರ ಚಿತ್ರಗಳು ಒಂದರಲ್ಲಿ ಬಡತನದಿಂದ ಗಂಡ—ಹೆಂಡರು ಮರಣಹೊಂದಿದರೆ, ಇನ್ನೊಂದರಲ್ಲಿ ಬಡತನದ ಭೀಕರ ನಗ್ನ ಚಿರಸ್ಥಾಯಿಯಾಗಿ ನಿಂತಿದೆ. ಬಿ. ಸುನಂದಮ್ಮರ ಕಮಲಕುಸುಮದಲ್ಲಿ—ಕುಸುಮ ಎರಡನೆಯ ಹೆಂಡತಿ ಗಂಡನನ್ನು ಕಾಡುವಳು. ಒಂದಿನ ಜರದ ಸೀರೆ ಹರಿದುದು ಕಂಡಿತು. ಗಂಡ-ಕಮಲಳು ತನ್ನ ಸೇವೆಯಲ್ಲಿ ಜರದ ಸೀರೆಯನ್ನು ಹರಿಯಲು ಹಿಂಜರಿಯಲಿಲ್ಲ ಎಂದು ಹೇಳುವನು. ಆಗ ಕುಸುಮಳ ಹೃದಯ ಪರಿವರ್ತನೆಯಾಯಿತು. ಇದು ಕತೆಯ ಓಟದಲ್ಲಿ ಅದ್ಭುತತೆ ಅಶ್ವತ್ಥ ನಾರಾಯಣರಾಯರ "ದೇವಿಯವರು'' ಗುರಿಯನ್ನು ಸಾಧಿಸಲು ಅವರ ಓಡಾಟ, ತೀರ್ಥಾಟನ, ಮಂಗನ ಮರಣ, ವೈದ್ಯನ ಬಳಿಯಲ್ಲಿ ತೋರಿಸಿದ ಜಿಪುಣತನ ಪರಿಣಾಮಕಾರಿಯೆನಿಸವು. ಡ್ರೈವರ ಮುನಿಸ್ವಾಮಿಯ ಕತೆಯು ಆತ್ಮಚರಿತ್ರೆಯೆನಿಸಿದರು ಒಳ್ಳೆಯದು. ಕೆ. ಎಸ್. ರಾಮಚಂದ್ರರ "ಕರೀಮ" ಇವುಗಳಲ್ಲಿ ಎಲ್ಲಕ್ಕೂ ಒಳ್ಳೆಯದು. ಕತೆಯಜೀವ—ಕರೀಮ ನಾಲು ಕಟ್ಟುವವ. ಅದೊಂದು ಅವನ ನಿತ್ಯ ಕರ್ಮ. ಮನಸಿನಿಂದ, ಮಾತಿನಿಂದ, ಕೈಯಿಂದ ಪರಿಶುದ್ಧ. ಶೋಕಿಗಾಗಿ ಒಂದು ಹೋರಿಯನ್ನು ಕಟ್ಟುವ. ತನ್ನ ಜೀವದಂತೆ ಮೇಯಿಸಿದ. ಜಾತ್ರೆಯಲ್ಲಿ ಅದಕ್ಕೆ ಮನ್ನಣೆ. ಗೌಡರಿಗೆ ರೋಷ. ಅದನ್ನು ಕಳವು ಮಾಡಿಸಿದರು. ಕರೀಮನಿಗೆ ತಳಮಳ. ಆದರೂ ಇನ್ನೊಂದು ಸಾಕಿದ ಮತ್ತೆ ಮೇಯಿಸಿದ-ಈ ಸಾರೆಯ ಜಾತ್ರೆಯಲ್ಲಿ ಮತ್ತೆ ಮನ್ನಣೆ ಸಿಗುವದೆಂದು ಜನರಾಡಿಕೊಂಡರು. ಗೌಡರಿಗೆ ದ್ವೇಷ. ಕದಿಯ ಹೇಳಿದರು. ಈ ಗೊಂದಲದಲ್ಲಿ ಕರೀಮನ ಕೊಲೆ....ಹಳ್ಳಿಯಲ್ಲಿ ಗೌಡರ ಪುಂಡಾಟಿಕೆ ಹೇಳತೀರದು. ಇಂಥ ಸಾವಿರ ಚಿತ್ರಗಳ ಹಿಂದೆ ಗೌಡರ ಕೈವಾಡ. ಕತೆಯಲ್ಲಿ ವಾಸ್ತವತೆ ಜೀವಂತವಾಗಿ ನಿಂತಿದೆ, ಹಳ್ಳಿಯ ಜನರಿಗೆ ದನಗಳೆಂದರೆ ಪ್ರಾಣ. ತಾವು ಉಪವಾಸ ಬಿದ್ದರೂ ಮೂಲೆಯಲ್ಲಿ ಕಟ್ಟಿದ ತಮ್ಮ ಮೂಕ ಪ್ರಾಣಿಯು ಮೆಲುಕಾಡಿಸುತ್ತಿರಬೇಕು. ಕರೀಮನು ಹಳ್ಳಿಯ ಮಕ್ಕಳ ಪ್ರತಿನಿಧಿಯಾಗಿ ನಿಂತಿರುವನು. ಗೌಡರ ಉನ್ಮತ್ತ ರೋಷದ ಕೃಪೆಗೆ ಬಲಿಯಾಗಿ ಬಿದ್ದನು.

## ಉಳಿದವು

ಕೆ. ನ್ ರ "ಸದಾನಂದ ವಿಲಾಸದಲ್ಲಿ ಭೀಕರ ಕೊಲೆ'' ಅಸಾಧ್ಯವೆನಿಸಿದರೆ ತಿಕಮಗಡ ಸಂಸ್ಥಾನದಲ್ಲಿಯ ಒಬ್ಬ ಶಿಕ್ಷಕನ ವೃತ್ತಾಂತವನ್ನು ಓದಿ ಮನಗಾಣಬಹುದು. ಹೊಸ ಪದ್ಧತಿಯ ಪತ್ತೇದಾರಿ ಕತೆ. ಗಿದ್ದು ದೃಷ್ಟಿ, ಕಾಫೀವ್ಯಸನ, ೬೦ ನೆಯ ನಂಬರ ಮನೆ ತಿಳಿನಗೆಯ ಕತೆಗಳು. ಗಿದ್ದುದೃಷ್ಟಿಯು ಎಂಥ ಗಂಭೀರ ಸ್ವಭಾವದವರನ್ನು ನಗಿಸಬಹುದು.

## ಜ್ಯೇಷ್ಠ ಪಟ್ಟಿ

ಪಟ್ಟಿಕ್ಕೆ ಕೊನೆಗೆ ಮೂರು ಕತೆಗಳು ಉಳಿದವು.

### ೧. ಆ ತಾಯಿ ತೀ. ರಾ. ನರಸಿಂಹಮೂರ್ತಿ.

ಡಾ. ಮೋಹನರಿಗೆ ಕರುಣಾ ಹೆಂಡತಿ. ಪಟ್ಟಣದಲ್ಲಿ ವಿದ್ಯಾರ್ಥಿಗಳ ಮುಷ್ಕರ. ಪೋಲೀಸರು ಗೋಳೀಬಾರು ಮಾಡುವರು. ಸಮಾಜವು ವಿದ್ಯಾರ್ಥಿಗಳ ಸಹಕಾರಿಯಾಗಿ ನಿಂತರೂ ಅದನ್ನು ತಡೆಯುವದಾಗಲಿಲ್ಲ. ಬೀದಿಯ ಮೇಲೆ ಸಾವಿರಾರು ಜನರ ಮುಂಡರುಂಡಗಳು. ಆಗಸ ತುಂಬ ಕ್ರಂದನ ಡಾಕ್ಟರರು ಅನೇಕ ಗಾಯಾಳುಗಳನ್ನು ಪಚರಿಸಿದರು. ಕಣ್ಣಲ್ಲಿ ನಿರಪರಾಧಿ ವಿದ್ಯಾರ್ಥಿಗಳ ರಕ್ತ ಮಡುವುಗಟ್ಟಿ ನಿಂತ ಚಿತ್ರ. ಉದ್ವಿಗ್ನತೆಯಿಂದ ಮನೆಗೆ ಬರುವರು. ರಾತ್ರಿಯಲ್ಲಿ ಒಬ್ಬ ಅಭಾಗಿನಿಯು ಬರುವಳು. ಮಗನ ಅಸಹಾಯ ಸ್ಥಿತಿಗೆ ಸಹಾಯ ಬಯಸುವಳು. ಮರುದಿನ ಬನ್ನಿರೆಂದು ಹೇಳಿ ಹೋಗುವಳು. ಡಾಕ್ಟರರು ಹೋಗುವರು. ಆಕೆ ಹುಚ್ಚಿ. ಮಗನ ಮರಣ ಮುನ್ನಾ ದಿನವೇ ಸಂಭವಿಸಿದೆ. ಡಾಕ್ಟರರು ಅರಿತು ದಿಗ್ಭ್ರಾಂತರಾಗುವರು....ಕತೆಯು ಉತ್ಕೃಷ್ಟವಾದ ವಾತಾವರಣದಲ್ಲಿ ಏರುತ್ತ, ಏರುತ್ತ ಶಿಖರವನ್ನು ಮುಟ್ಟುವದು. ಆಕೆಯ ಹುಚ್ಚುತನ ಪ್ರಸಂಗದ ಪರಿಸೀಮೆಗೆ ಬಂದು ನಿಲ್ಲುವದು. ಅಸ್ವಾಭಾವಿಕತೆಗೆ ಎಡೆಯಿಲ್ಲ ಆದರೆ ಕೊನೆ ಒಂದಿಷ್ಟು ಲಂಬಿಸಿದಂತಾಗಿದೆ.

### ೨. ನನ್ನ ನೂರಜಹಾನ

ಲೇ- ಎಸ್. ನಾರಾಯಣರಾವ

ಇನ್ಸಪೆಕ್ಟರನು ಆಕೆಯನ್ನು ಚಿಕ್ಕಂದಿನಲ್ಲಿಯೂ ಪ್ರೀತಿಸುತ್ತಿದ್ದ. ಆಕೆ ಅವನ ಪಾಲಿನ ನೂರಜಹಾನ. ಅವಳು ಬೇರೊಬ್ಬಳನ್ನು ಮದುವೆಯಾದಳು. ಅವನನ್ನು ಒಮ್ಮೆ ಕಂಡಳು ಮಾತಾಡಿದಳು. ಅವಳ ಕರೆಯಂತೆ ಭೆಟ್ಟಿಯಾಗಲು ಹೋಗಬೇಕೇ? ಎಂದು ವಿಚಾರಿಸಿದನು. ಆದರೆ ಹೋಗಲಿಲ್ಲ. ಮತ್ತೊಮ್ಮೆ ಭೆಟ್ಟಿಯಾದಳು. ಈಗ ಸಹ ಇನಸ್ಪೆಕ್ಟರನು ಒಂಟಿಜೀವನದ ತವಸಿ. ನೂರಜಹಾನಳು ಮರುಗಿದಳು. ಇವನಿಗಾಗಿ ಒಬ್ಬ ಸುಸ್ವರ ಕನ್ಯೆಯನ್ನು ತಂದಳು. ಲಗ್ನಕ್ಕಾಗಿ ಬೇಡಿಕೊಂಡಳು ಆಗ ಇನಸ್ಪೆಕ್ಟರನು- ನಾನೂ ಒಬ್ಬಳನ್ನು ಆರಿಸಿಕೊಂಡಿರುವೆ. ಸಮ್ಮತಿಸಲು ಕೇಳಿಕೊಂಡನು. ಆಕೆ ಬೇರಾರೂ ಅಲ್ಲ ತನ್ನ ಹೃದಯದಲ್ಲಿ ಬಹುದಿನ ಮೂರ್ತಿಗೊಂಡ ಅವಳೇ! ಮದುವೆ ಯಾಯಿತು. .

ಇನಸ್ಪೆಕ್ಟರನ ಈ ರೀತಿ ಒಳ್ಳೆಯದೇ ? ಅವನಿಗೆ ನೂರಾರು ಬೇರೆ ಹೆಣ್ಣು ಬರಬಹುದಿದ್ದಿತು. ಆದರೆ ಹೃದಯದಲ್ಲಿ ತುಂಬಿಕೊಂಡ ಆ ನೂರಜಹಾನಳನ್ನು ಇಳಿಸಿ ಬೇರಾರನ್ನು ಏರಿಸಲು ಸಿದ್ಧನಿಲ್ಲ. ಅವನಿಗೆ ಆಕೆ ಹೆಂಡತಿಯಾಗಿ ಸಿಕ್ಕರೂ ಸರಿ, ಇಲ್ಲದಿದ್ದರೂ ಸರಿ. ಒಂಟಿ—ಬಾಳಿನಲ್ಲಿ ಆಕೆಯನ್ನು ನೆನೆಯುತ್ತ ಸ್ವರ್ಗವನ್ನು ಏರಬಯಸಿದವ. ಪ್ರೇಮದಿಂದ ಪರಿತಪ್ತನಾದ ಇನಸ್ಪೆಕ್ಟರನಿಗೆ ದೈವ ಅನುಕೂಲವನ್ನು ಒದಗಿಸಿತು. ವಿಧವೆಯಾದರೂ ಸರಿ. ಲಗ್ನವಾದ. ಸಮಾಜವು ಇಂಥವರ ಪ್ರೇಮಕ್ಕೆ ಬೆಲೆಗುಡದಿರದೇ ! ಕಟು-ಕರ್ಮಠರು ಸೋ ಎನ್ನದೆ ಗತಿಯಿಲ್ಲ.

### ೩. ಭೂಮಿಗಿಳಿದ ತಾರೆ

ಲೆ- ವಿ. ಸಿ. ಹಿತ್ತಿಲಮನಿ

ಈಸಾರೆಯ ಎಲ್ಲ ಕತೆಗಳಲ್ಲಿ ಉತ್ಕೃಷ್ಟವಾದುದು. ಜಬುನ್ನೀಸಳು ಸಮ್ರಾಟ ಔರಂಗಜೇಬನ ಮಗಳು. ಸೌಂದರ್ಯಶಾಲಿನಿಯು. ರಾಜಕಾರಣದಲ್ಲಿ ನಿಪುಣೆಯು. ಮೇಲೆ ಕವಿ. ಇಂದು ಯೌವನ ಪಥದಲ್ಲಿ ಕಾಲಿಟ್ಟಿರುವಳು. ದಿಕ್ಕುದಿಕ್ಕಿನ ರಾಜಕುಮಾರರೆಲ್ಲ ತುಚ್ಛ. ಅಖಲೀಕ ಖಾನನನ್ನು ಹೃದಯೇಶ್ವರನೆಂದು ಅರಿಸಿದಳು. ತಂದೆಗೆ ಇದು ತಿಳಿಯಿತು. ಹೇಳಿಕಳಿಸಿದನು. ಖಾನನು ಸಮ್ರಾಟನ ವಿಚಿತ್ರ ನಡತೆಗೆ ಹೆದರಿ ಬರಲಿಲ್ಲ. [illegible] ಕಡೆಗೆ ಸಿಕ್ಕ. ಜಬುನ್ನೀಸಳು ಬರಮಾಡಿಕೊಂಡಳು. ರಾತ್ರಿಯೆಲ್ಲ ರಾಜಕುಮಾರಿಯ ಆಶ್ರಯದಲ್ಲಿ ಕಳೆದನು. ಇದು ಸಹ ಔರಂಗಜೇಬನಿಗೆ ತಿಳಿಯಿತು ಮುಂಜಾನೆ ಮಗಳನ್ನು ಕಾಣಲು ಬಂದನು. ರಾಜಕುಮಾರಿಯು ಖಾನನನ್ನು ನೀರು ಕಾಸುವ ಹಂಡೆಯಲ್ಲಿ ಬಚ್ಚಿಟ್ಟಳು. ಸ್ನಾನದ ನೀರಿನ ಸಂಗಡ ಅಖಲೀಕಖಾನನು ಬೆಂದುಹೋದನು.

ಕತೆಯ ವಸ್ತು ಎಂಥ ಭಯಂಕರವಾದುದು ! ಅದಕ್ಕೆ ಹೊಂದಿಕೊಂಡು ಬರುವ ಸನ್ನಿವೇಶ ಎಂಥ ರುದ್ರಮಯವಾದುದು ! ಪ್ರೇಮವು ತೀಕ್ಷ್ಣ ಜ್ವಾಲಾಮುಖಿಯಂತೆ ಎಂಥ ಪ್ರಖರವಾದುದು ! ಕತೆಯಲ್ಲಿ ಪಾತ್ರಗಳು ಕೇವಲ ಮೂರು. ವಜ್ರ ದುಂಡಿಗಲ್ಲಿನಂತೆ ಎಷ್ಟು ಕಠೋರ ! ಇದೆಲ್ಲ ನಾಟಕೀಯ ಸ್ವಗತದಂತೆ ನಿರರ್ಗಳವಾಗಿ ನಡೆದುಬಿಡುವದು.

ಜೇನಹುಳುಗಳ ರಾಣಿಯಂತೆ ಜಬುನ್ನೀಸಳು ನವಶಾಲಿನಿಯಾಗಿ ತಾರುಣ್ಯದ ತುಳುಕಾಟದಲ್ಲಿ ದಿನಗಳನ್ನೆಣಿಸುವಳು. ಅಖಲೀಕಖಾನನು ಗಂಡುಹುಳುಗಳುವಾಗಿ ದೊರೆತನು. ಪ್ರೇಮ ಪ್ರಸಂಗದ ತರುವಾಯ ಮರಣವೆಂದು ಸಂಪೂರ್ಣ ಅರಿತಿರುವನು. ಆಗ ತಾನು ಪಾಲಿಸುವ ಪುರುಷಧರ್ಮ ಅದೊಂದೇ ಎಂದು ತಿಳಿಯುವನು. ವಿಧಿಯು ಔರಂಗಜೇಬನು ಇವೆಲ್ಲವನ್ನು ನೋಡುವನು. ಮುಂದಿನದನ್ನು ಸಹ ತಾನೇ ಮೋನಿಯಾಗಿ ಬರೆದು ಮುಗಿಸುವನು. ಮಗಳ ಸಲುವಾಗಿ ಎಷ್ಟು ಮರುಗಿದರೇನು ? ಒಡೆದ ಮುತ್ತು ಸರಿಪಡಿಸಲಾದೀತೇ ! ಹೀಗೆ ಒಂದಲ್ಲ ಸಾವಿರ ಮಾತುಗಳನ್ನು ಹೇಳಬಹುದು. ಅದೊಂದು ಕತೆಯಾದೀತು.

ಪ್ರೇಮ-ಕಾಮದ ಕತೆಗಳನ್ನು ಬರೆಯುವವರಿಗೆ ಇದೊಂದು ಸುಂದರ ದೃಷ್ಟಾಂತವು.

[ ಮೇಲೆ ನಿರ್ದೇಶಿಸಿದ ಕತೆಗಾರರ ಹೆಸರಿನ ಹಿಂದೆ ಶ್ರೀ ಸೇರಿಸಿ ಓದಬೇಕು. ]



## -ಕರ್ನಾಟಕಸ್ಥರ ಮಹಾಸಭೆ

ಇದೇ ತಿಂಗಳ ೨೫ನೇ ತಾರೀಕು ದಾವಣಗೇರಿಯಲ್ಲಿ ಅಖಿಲ ಕರ್ನಾಟಕ ಮಹಾಸಭೆಯನ್ನು ಸೇರಿಸಬೇಕೆಂದು ಗೊತ್ತಾಗಿದೆ. ಕರ್ನಾಟಕ ಪ್ರಾಂತೀಕರಣಕ್ಕಾಗಿ ಹೋರಾಡುತಿರುವ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿ, ಅಖಿಲ ಕರ್ನಾಟಕ ಏಕೀಕರಣ ಸಂಘಗಳ ಪರವಾಗಿ ಈ ಮಹಾಸಭೆ ಸೇರಲಿದೆ. ಕಾಂಗ್ರೆಸ್ ಕಾರ್ಯಸಮಿತಿಯ ಸದಸ್ಯರಾದ ಬಾಬೂ ರಾಜೇಂದ್ರ ಪ್ರಸಾದರನ್ನು ಮಹಾಸಭೆಯ ಉದ್ಘಾಟನಕ್ಕೆ ಕರೆಯಿಸಬೇಕೆಂದು [illegible]ಗಿದೆ. ದಾವಣಗೇರಿಯಲ್ಲಿ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಅಧ್ಯಕ್ಷ ಶ್ರೀ. ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿಯೊಂದು ರಚಿತವಾಗಿ ಮಹಾಸಭೆ ಸೇರಿಸುವ ಏರ್ಪಾಟು ಈಗಿನಿಂದಲೆ ಪ್ರಾರಂಭವಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಇಂಥ ಮಹಾಸಭೆಯಲ್ಲಿ ಕರ್ನಾಟಕದ ಒಮ್ಮುಖದ ಬೇಡಿಕೆಯನ್ನು ಮಂಡಿಸುವುದು ಅತ್ಯವಶ್ಯವಾಗಿದೆ. ಘಟನಾ ಸಮಿತಿಯ ಮೂಲಕ ರಾಷ್ಟ್ರದ ರಾಜ್ಯಘಟನೆ ಸಿದ್ಧವಾಗಲಿರುವ ಈ ಕಾಲದಲ್ಲಿ ಕರ್ನಾಟಕಸ್ಥರು ತಮ್ಮ ಸ್ವತಂತ್ರ ಪ್ರಾಂತದ ಪ್ರಶ್ನೆಯನ್ನು ಅಲಕ್ಷಿಸಿದರೆ ಆ ಬಗ್ಗೆ ಆಸ್ಥೆಯಿಂದ ಪ್ರಯತ್ನಿಸದಿದ್ದರೆ ಕನ್ನಡಿಗರು ಹೀಗೆಯೇ ಬೇರೆ ಬೇರೆ ಆಡಳಿತಗಳಲ್ಲಿ ಹರಿದು ಹಂಚಿ ಉಳಿಯಬೇಕಾಗುವುದು. ಆದುದರಿಂದ ಈಗ ಮಹಾಸಭೆಯನ್ನು ಸೇರಿಸುವ ನಿರ್ಧಾರ ಮಾಡಿದ್ದರಿಂದ ಅತ್ಯಂತ ಯೋಗ್ಯವಾಗಿದೆ. ಭಾವೀ ಸ್ವತಂತ್ರ ಕರ್ನಾಟಕ ಪ್ರಾಂತದಲ್ಲಿ ಸಂಸ್ಥಾನಗಳನ್ನು ಸಮಾವೇಶ ಮಾಡಿಕೊಳ್ಳಬೇಕೊ ಇಲ್ಲವೆ ಸದ್ಯಕ್ಕೆ ಬ್ರಿಟಿಶ ಕರ್ನಾಟಕ ಏಕೀಕರಣವನ್ನಷ್ಟೆ ನಮ್ಮ ಧ್ಯೇಯವನ್ನಾಗಿಟ್ಟುಕೊಳ್ಳಬೇಕೊ ಎಂಬುದು [illegible]ದ ಪ್ರಶ್ನೆಯಾಗಿದೆ. ಈ ಬಗ್ಗೆ ಕೂಲಂಕಷ ವಿಚಾರ ಮಾಡಿ ನಿಶ್ಚಿತ ಧೋರಣ ಸ್ವೀಕರಿಸಬೇಕು. ಮತ್ತು ಅದರಂತೆ ಕಾರ್ಯ ಪ್ರಾರಂಭವಾಗಬೇಕು. ಘಟನಾ ಸಮಿತಿಯಲ್ಲಿ ಭಾಷಾನ್ವಯ ಪ್ರಾಂತರಚನೆಯ ಪ್ರಶ್ನೆಯನ್ನು ಮಂಡಿಸಿ ಅದಕ್ಕೆ ಮನ್ನಣೆ ಪಡೆವುದು ಅತ್ಯವಶ್ಯವಾಗಿದ್ದು ಹಾಗೆ ಮಾಡಲು ನಮ್ಮ ಪ್ರತಿನಿಧಿಗಳನ್ನು ಬಿನ್ನವಿಸಿಕೊಳ್ಳಬೇಕಾಗಿದೆ. ಇವೆಲ್ಲ ಮಹತ್ವದ ಪ್ರಶ್ನೆಗಳನ್ನು ಇದೀಗ ಬಿಡಿಸಬೇಕಾಗಿರುವುದರಿಂದ ಕರ್ನಾಟಕಸ್ಥರು ಈ ಮಹಾಸಭೆಗೆ ಹೋಗಿ ಅದನ್ನು ಯಶಸ್ವಿ ಮಾಡಿ ಕರ್ನಾಟಕದ ಪ್ರಾಂತೀಕರಣದ ಪ್ರಗತಿಯನ್ನು ಸಾಧಿಸಬೇಕೆಂದು ಸೂಚಿಸುತ್ತೇವೆ.

## ಮಹಾರಾಷ್ಟ್ರ ಪ್ರಾಂತೀಕರಣ

ಮುಂಬಯಿಯಲ್ಲಿ ಕಳೆದ ರವಿವಾರ ಶ್ರೀ ಶಂಕರರಾವ ದೇವ ಇವರ ಅಧ್ಯಕ್ಷತೆಯಲ್ಲಿ ಮಹಾರಾಷ್ಟ್ರ ಏಕೀಕರಣ ಪರಿಷತ್ತು ಸೇರಿ ಬೇರೆ ಬೇರೆ [illegible]ಗಳಲ್ಲಿ ಹರಿದುಹೋಗಿರುವ ಮಹಾರಾಷ್ಟ್ರ ಭಾಗಗಳನ್ನು ಒಂದುಗೂಡಿಸಿ ಸ್ವತಂತ್ರ ಪ್ರಾಂತವನ್ನಾಗಿ ಮಾರ್ಪಡಿಸಬೇಕೆಂಬ ಗೊತ್ತುವಳಿ ಸ್ವೀಕೃತವಾಯಿತು. ಕರ್ನಾಟಕದಷ್ಟು ಅಲ್ಲದಿದ್ದರೂ ಮಹಾರಾಷ್ಟ್ರದ ವಿಭಾಗಗಳೂ ಮಹಾರಾಷ್ಟ್ರ ಮಧ್ಯಪ್ರಾಂತ ವರ್ಹಾಡ ಮತ್ತು ಹಲವು ದೇಶೀಯ ಸಂಸ್ಥಾನಗಳಲ್ಲಿ ಹಂಚಿಹೋಗಿವೆ. ಇವೆಲ್ಲ ಒಟ್ಟುಗೂಡುವುದು ಅವಶ್ಯವೆಂದು ಬೇರೆ ಹೇಳಬೇಕಿಲ್ಲ. ಭಾಷಾನ್ವಯ ಪ್ರಾಂತರಚನೆಯ ತತ್ವಾನುಸಾರವಾಗಿಯೆ ಮಹಾರಾಷ್ಟ್ರ ಸ್ವತಂತ್ರ ಪ್ರಾಂತ ನಿರ್ಮಾಣವಾಗಬೇಕು. ಸ್ವಾಗತಾಧ್ಯಕ್ಷ ಶ್ರೀ ಎಸ್. ಕೆ. ಪಾಟೀಲರು ಮತ್ತು ಅಧ್ಯಕ್ಷ ಶ್ರೀ ಶಂಕರರಾವ ದೇವ ಇವರು ತಮ್ಮ ಭಾಷಣಗಳಲ್ಲಿ ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತ ರಚನೆಯ ತತ್ವಕ್ಕೆ ಮನ್ನಣೆ ಕೊಟ್ಟಿರುವರೆಂಬದನ್ನು ಹೇಳಿದರು. ಕಾಂಗ್ರೆಸ ಕಾರ್ಯಕರ್ತರು ಮಹಾರಾಷ್ಟ್ರ ಪ್ರಾಂತ ನಿರ್ಮಾಣದ ಪ್ರಶ್ನೆಯನ್ನು ಅಲಕ್ಷಿಸುತಿರುವರೆಂಬ ಹಲವರ ಆರೋಪವನ್ನು ಖಂಡಿಸಿ ಶ್ರೀ ದೇವರು ಕಾಂಗ್ರೆಸ್ಸು ಸ್ವಾತಂತ್ರ್ಯಕ್ಕೆ ಪ್ರಥಮ ಸ್ಥಾನ ಕೊಟ್ಟಿದೆ, ಸ್ವಾತಂತ್ರ್ಯ ಸಿಕ್ಕ ಬಳಿಕ ಪ್ರಾಂತ ರಚನೆ ಸುಲಭವಾಗುವದೆಂಬುದು ಕಾಂಗ್ರೆಸ್ಸಿನ ಧೋರಣೆ ಇದ್ದು ತದನುಸಾರವಾಗಿಯೆ ಕಾರ್ಯ ಮಾಡುತ್ತ ಬಂದಿದ್ದೇವೆಂದು ಹೇಳಿದರು. ಇದರಿಂದ ಪ್ರಾಂತೀಕರಣವನ್ನು ಕಾಂಗ್ರೆಸ್ಸಿಗರು ಅಲಕ್ಷಿಸುತಿರುವರೆಂದು ಯಾರೂ ಆರೋಪಿಸಲಾರರು. ಪ್ರಾಂತೀಕರಣದ ಉತ್ಸಾಹದಲ್ಲಿ ವಿಷಮಯ ಪ್ರಾಂತೀಯ ಭಾವನೆ ಬಾರದಂತೆ ನೋಡಿಕೊಳ್ಳುವದವಶ್ಯವೆಂದು ಶ್ರೀ ಪಾಟೀಲರು ಎಚ್ಚರಿಕೆ ಕೊಟ್ಟದ್ದು ಅವಶ್ಯವಾಗಿದೆ. ಇನ್ನು ಮಹಾರಾಷ್ಟ್ರದವರು ಈಗ ತಮ್ಮ ಪ್ರಾಂತವೆಂದು ಇಟ್ಟುಕೊಂಡಿದ್ದ ಭಾಗದಲ್ಲಿ ಕನ್ನಡ ಭಾಗವೂ ಸೇರಿದೆ. ಗಡಿ ನಿರ್ಣಾಯಕ ಸಮಿತಿಯು ಇದನ್ನು ನಿರ್ಣಯಿಸಬಹುದಾದರೂ ಪರಸ್ಪರರಲ್ಲಿ ತಿಕ್ಕಾಟ ವೇಳದಂತೆ ಕರ್ನಾಟಕ ಮಹಾರಾಷ್ಟ್ರದವರು ಮೊದಲಿನಿಂದಲೆ ಜಾಗ್ರತರಿರುವದು ಹಿತಕರ. ಬೆಳಗಾವಿ ಮತ್ತು ಕಾರವಾರ ಭಾಗಗಳನ್ನು ಮತ್ತು ದೇಶೀ ಸಂಸ್ಥಾನಗಳಲ್ಲಿಯ ಕನ್ನಡ ಭಾಗಗಳನ್ನು ಮರಾಠಿಗರು ತಮ್ಮ ಭಾವೀ ಪ್ರಾಂತದಲ್ಲಿ ಸೇರಿಸಿಕೊಂಡಿದ್ದಾರೆ. ಬಹುಸಂಖ್ಯಾಕ ಕನ್ನಡಿಗರಿರುವ ಭಾಗವು ಮಹಾರಾಷ್ಟ್ರದವರದೆಂದೂ ಆಗದು. ಈ ಮಾತನ್ನು ಮರಾಠಿಗರು ಮನಗಾಣಬೇಕು. ಸ್ವತಂತ್ರ ಪ್ರಾಂತ ನಿರ್ಮಾಣದ ಈ ಸಮಯದಲ್ಲಿ ಕನ್ನಡಿಗರೂ ಜಾಗ್ರತರಾಗಿ ತಮ್ಮ ಭಾಗವನ್ನು ನೆರೆಯವರು ನುಂಗದಂತೆ ನೋಡಿಕೊಳ್ಳಬೇಕು. ಮಹಾರಾಷ್ಟ್ರದವರು ಸ್ವತಂತ್ರ ಪ್ರಾಂತ ನಿರ್ಮಾಣ ಚಟುವಟಿಕೆಗಳಲ್ಲಿ ಕರ್ನಾಟಕಸ್ಥರ ಜತೆಯಲ್ಲಿಯೆ ಕಾರ್ಯ ಮಾಡಿದ್ದಾದರೆ ಅದಕ್ಕೆ ಹೆಚ್ಚು ಬಲ ಬರುವದೆಂದು ಬೇರೆ ಹೇಳಬೇಕಿಲ್ಲ.

# ಸಂಪಾದಕೀಯ * * * * * *
# ಟೀಕೆ-ಟಿಪ್ಪಣೆಗಳು

## ಶಿಕ್ಷಣ ಪದ್ಧತಿಯಲ್ಲಿ ಕ್ರಾಂತಿ

ಮುಂಬಯಿ ಸರಕಾರದ ಮುಖ್ಯ ಮಂತ್ರಿಗಳೂ ಶಿಕ್ಷಣ ಮಂತ್ರಿಗಳೂ ಆಗಿರುವ ಶ್ರೀ ಬಿ ಜಿ ಖೇರರು ಕರೆದ ಶಿಕ್ಷಣ ಮಂತ್ರಿಗಳ ಮತ್ತು ತಜ್ಞರ ಪರಿಷತ್ತು ಕಳೆದ ೩೦-೩೧ ನೇ ತಾರೀಕು ಜರುಗಿ ಮಹತ್ವದ ವಿಚಾರವಿನಿಮಯ ಮಾಡಿತು. ಹಿಂದುಸ್ತಾನದ ಶಿಕ್ಷಣ ಪದ್ಧತಿಯನ್ನು ಬ್ರಿಟಿಶ ಸರಕಾರದವರು ತಮಗನುಕೂಲವಾಗುವಂತೆ ಗೊತ್ತುಪಡಿಸಿದ್ದರಿಂದ ಹಿಂದೀಯರಿಗೆ ಅದು ಲಾಭಕರವಾಗಿರುವುದಿಲ್ಲ. ಆದರೆ ಹಿಂದೀಯರ ಕೈಯಲ್ಲಿ ಅಧಿಕಾರವಿಲ್ಲದ್ದರಿಂದ ಈ ವರೆಗೆ ಅವರು ಹೇಗೋ ಸಹಿಸುತ್ತ ಬಂದಿರುವರು. ಆದರೀಗ ಲೋಕಪ್ರಾತಿನಿಧಿಕ ಸರಕಾರಗಳು ಅಸ್ತಿತ್ವದಲ್ಲಿ ಬಂದದ್ದರಿಂದ ಶಿಕ್ಷಣದ ಪುನರ್ಘಟನೆಯ ಮಾತುಕತೆ ನಡೆದಿವೆ. ನಮ್ಮ ಮಕ್ಕಳ ಶಿಕ್ಷಣದಲ್ಲಿ ಇನ್ನು ಮುಂದೆ ಇಂಗ್ಲಿಷಿಗೆ ಯಾವ ಸ್ಥಾನವಿರತಕ್ಕದ್ದು ಮೂಲ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕೋ ಹೇಗೆ? ಪ್ರಾಥಮಿಕ ಶಿಕ್ಷಣವನ್ನು ಈಗಿನಂತೆ ಸ್ಥಾನಿಕ ಸಂಸ್ಥೆಗಳ ಆಡಳಿತಕ್ಕೊಳಪಡಿಸಬೇಕೋ ಇಲ್ಲವೆ ಸರಕಾರದವರು ತಮ್ಮ ಆಡಳಿತದಲ್ಲಿ ತಗೆದುಕೊಳ್ಳಬೇಕೋ ಎಂಬವು ವಿಚಾರಿಸತಕ್ಕ ಮುಖ್ಯ ವಿಷಯಗಳಾಗಿದ್ದವು. ಇಂಗ್ಲಿಶ್ ಮಾತೃಭಾಷೆ ಇದ್ದ ಹೊರತು ಪ್ರಾರಂಭದಲ್ಲಿ ೭—೮ ವರ್ಷಗಳ ಮೂಲ ಶಿಕ್ಷಣದಲ್ಲಿ ಇಂಗ್ಲಿಶ್ ಭಾಷೆಗೆ ಸ್ಥಾನವಿರತಕ್ಕದ್ದಲ್ಲ ಅಂದರೆ ಮಾಧ್ಯಮಿಕ ಶಿಕ್ಷಣದ ಉತ್ತರಾರ್ಧದ ವರೆಗೂ ಇಂಗ್ಲಿಷನ್ನು ಒತ್ತಾಯದಿಂದ ಕಲಿಸಬಾರದೆಂದು ಅಭಿಪ್ರಾಯ ಪಡಲಾಯಿತು. ಹಿಂದುಸ್ತಾನದ ಶಿಕ್ಷಣದಲ್ಲಿ ಇಂಗ್ಲಿಷಿಗೆ ದೊರೆತ ಅವಾಸ್ತವ ಸ್ಥಾನವನ್ನು ತೆಗೆದು ಹಾಕಬೇಕಾದರೆ ಒತ್ತಾಯದಿಂದ ಇಂಗ್ಲಿಷನ್ನು ನಮ್ಮ ವಿದ್ಯಾರ್ಥಿಗಳ ಮೇಲೆ ಹೇರುವುದನ್ನು ನಿಲ್ಲಿಸಬೇಕು. ಇಂದು ಇಂಗ್ಲಿಷಿಗಿದ್ದ ಸ್ಥಾನವನ್ನು ಹಿಂದಿಗೆ ಕೊಡಬೇಕು ಇಂಗ್ಲಿಷ್ ಅಂತರ್‌ರಾಷ್ಟ್ರೀಯ ಭಾಷೆಯಾದ್ದರಿಂದ ಐಚ್ಛಿಕವಾಗಿ ಅದನ್ನು ಕಲಿಸಬಹುದು ಮೂಲ ಶಿಕ್ಷಣದ ಪ್ರಯೋಗವೂ ಈಗ ಸಾಕಷ್ಟು ಆಗಿದೆ. ಇನ್ನು ಆಯಾ ಪ್ರಾಂತದವರು ಹೆಚ್ಚು ಜೋರಿನಿಂದ ಅದನ್ನು ಸಾಗಿಸಬೇಕಾಗಿದೆ. ಕೇಂದ್ರೀಕೃತ ಇಲ್ಲವೆ ವಿಕೇಂದ್ರೀಕೃತ ಯಾವದೇ ಪದ್ಧತಿಯನ್ನು ನಾವು ಅನುಸರಿಸಿದರೂ ಮೂಲ ಶಿಕ್ಷಣವು ಎರಡೂ ಪ್ರಸಂಗಗಳಲ್ಲಿ ಸಹಾಯಕವಾಗುವದೆಂದು ಡಾ ಝಾಕೀರ ಹುಸೇನರು ಹೇಳಿದ್ದು ಉಚಿತವಾಗಿದೆ. ಮೂಲ ಶಿಕ್ಷಣದ ಬಗ್ಗೆ ಇದ್ದ ಪೂರ್ವಗ್ರಹಗಳನ್ನು ಬಿಟ್ಟುಗೊಟ್ಟು ಪ್ರಯತ್ನಿಸಿದ್ದಾದರೆ ಅದು ಯಶಸ್ವಿಯಾಗಿ ಉದ್ದಿಷ್ಟ ಸಾಧ್ಯವಾಗುವದು. ಪ್ರಾಥಮಿಕ ಶಿಕ್ಷಣವು ಸ್ಥಾನಿಕ ಸಂಸ್ಥೆಗಳ ಆಡಳಿತದಲ್ಲಿರುವುದು ಲಾಭಕರವಲ್ಲೆಂದು ಶಿಕ್ಷಣ ತಜ್ಞರು ಅಭಿಪ್ರಾಯಪಡುತಿರುವರು. ಈ ವರೆಗಿನ ಅನುಭವ ನೋಡಿದರೆ ಸ್ಥಾನಿಕ ಸಂಸ್ಥೆಗಳ ಆಡಳಿತದಲ್ಲಿ ಪ್ರಾಥಮಿಕ ಶಿಕ್ಷಣ ಪ್ರಗತಿ ಪಡೆದಿಲ್ಲೆಂದು ಸ್ಪಷ್ಟವಾಗುವುದು. ಕೆಲವೊಂದು ವಿಶಿಷ್ಟ ಹಕ್ಕು ಸಂಬಂಧಗಳುಳ್ಳವರನ್ನು ಬಿಟ್ಟರೆ ಉಳಿದವರೆಲ್ಲ ಪ್ರಾಥಮಿಕ ಶಿಕ್ಷಣ ಸರಕಾರದ ಆಡಳಿತದಲ್ಲಿಯೆ ಇರಬೇಕೆಂದು ಅಭಿಪ್ರಾಯಪಡುತಿರುವರು. ಶಿಕ್ಷಣ ತಜ್ಞರ ಈ ಪರಿಷತ್ತಿನಲ್ಲಿಯೂ ಇದೇ ಬಗೆಯ ಅಭಿಪ್ರಾಯ ಪಡಲಾಯಿತು. ಪರಿಷತ್ತಿನಲ್ಲಿ ಚರ್ಚಿಸಲ್ಪಟ್ಟ ವಿಷಯಗಳನ್ನು ಜಾರಿಯಲ್ಲಿ ತರಲು ಆಯಾ ಮಂತ್ರಿಗಳು ತಮ್ಮ ಪ್ರಾಂತಗಳಿಗೆ ಹೋದ ಬಳಿಕ ಪ್ರಯತ್ನಿಸುವರೆಂದು ನಂಬಲಾಗಿದೆ ಶಿಕ್ಷಣ ಪದ್ಧತಿಯಲ್ಲಿ ಕ್ರಾಂತಿಯಾಗುವುದವಶ್ಯವೆಂದೂ ಬೇರೆ ಹೇಳಬೇಕಿಲ್ಲ.

## ಮುಸ್ಲಿಂ ಲೀಗಿನ ಅಸಹಕಾರ

ಅಖಿಲ ಭಾರತ ಮುಸ್ಲಿಂ ಲೀಗಿನ ಸಭೆ ಮುಂಬಯಿಯಲ್ಲಿ ಕಳೆದ ವಾರ ಸೇರಿ ಬ್ರಿಟಿಶ್ ಮಂತ್ರಿತ್ರಯದ ಅಲ್ಪಾವಧಿ ದೀರ್ಘಾವಧಿ ಯೋಜನೆಗಳನ್ನು ಸ್ವೀಕರಿಸಬೇಕೆಂದು ದಿಲ್ಲಿಯಲ್ಲಿ ಮಾಡಿದ ನಿರ್ಣಯವನ್ನು ರದ್ದುಪಡಿಸಿ ಹೋರಾಟವನ್ನು ಹೂಡಬೇಕೆಂದು ನಿರ್ಣಯಿಸಿತು. ಈ ಸಂಬಂಧದ ವಿವರ ಸುದ್ದಿಯನ್ನು ಬೇರೆಡೆ ಕೊಟ್ಟಿದೆ. ಬ್ರಿಟಿಶ್ ಮಂತ್ರಿತ್ರಯವು ಕೊಟ್ಟ ವಚನವನ್ನು ಮುರಿಯಿತೆಂದೂ ಕಾಂಗ್ರೆಸ್ಸಿನವರು ಮಂತ್ರಿತ್ರಯರ ಯೋಜನೆಗೆ ತಮಗೆ ಸರಿದೋರಿದಂತೆ ಅರ್ಥ ಮಾಡುತಿರುವರೆಂದೂ ಅದನ್ನು ಸಶರ್ತ ಸ್ವೀಕರಿಸಿರುವರೆಂದೂ ಮುಂತಾಗಿ ಆರೋಪಿಸಿ ಲೀಗು ಘಟನಾ ಸಮಿತಿಯೊಡನೆ ಅಸಹಕಾರ ಧೋರಣ ಸ್ವೀಕರಿಸಿದೆ ಕಾಂಗ್ರೆಸ್ಸು ಬ್ರಿಟಿಶ್ ಸರಕಾರದ ಸಹಾನುಭೂತಿಯಿಂದ ಮತ್ತು ಬಹುಮತದ ಬೆಂಬಲದಿಂದ ಮುಸ್ಲಿಂ ಲೀಗಿನ ಬಲವನ್ನು ಕುಂದಿಸಬಯಸುತ್ತದೆಂದೂ ಲೀಗಿನ ಆರೋಪ. ಆದರೆ ನಿಜವಾಗಿ ವಿಚಾರ ಮಾಡಿದರೆ ಇವಾವ ಆರೋಪಗಳೂ ಸಿದ್ಧವಾಗುವಂತಹವಲ್ಲೆಂಬುದು ಗೊತ್ತಾಗುವುದು. ಕಾಂಗ್ರೆಸ್ಸು ಇಲ್ಲವೆ ಸರಕಾರವು ಮಂತ್ರಿತ್ರಯರ ಘೋಷಣೆಯನ್ನು ಮೀರಿ ಅಥವಾ ಅದನ್ನು ಕಡೆಗಣಿಸಿ ಮುಂದೆ ಸಾಗುತ್ತಿರುವರೆಂದು ಕಂಡು ಬಂದಿದ್ದಾದರೆ ಆಗಲೆ ಅದನ್ನು ಬಹಿಷ್ಕರಿಸಬಹುದಾಗಿತ್ತು. ಹೀಗಾಗಬಹುದೆಂದು ಮೊದಲೆ ಕಲ್ಪನೆ ಮಾಡಿಕೊಂಡು ಅಸಹಕಾರ ಧೋರಣ ಸ್ವೀಕರಿಸುವುದು ಸರಿಯಲ್ಲ. ಜಿನ್ನಾರವರು ಪತ್ರಿಕಾ ಪ್ರತಿನಿಧಿಗಳ ಭೆಟ್ಟಿಯಲ್ಲಿ ಲೀಗಿನ ಗೊತ್ತುವಳಿಯನ್ನು ಸ್ಪಷ್ಟೀಕರಿಸುವಾಗ ಮಾಡಿದ ವಿಧಾನಗಳೂ ಸಾಧಾರವಾಗಿರುವುದಿಲ್ಲ, ಕೇವಲ ಕಾಲ್ಪನಿಕವಾಗಿವೆ. ಕಾಂಗ್ರೆಸ್ಸು ಹಿಂದ ರಾಷ್ಟ್ರೀಯ ಸೈನಿಕರ ಸಹಾಯದಿಂದ ೧೯೪೨ ಕ್ಕಿಂತ ಉಗ್ರವಾದ ಹೋರಾಟ ಹೂಡಲು ಗುಪ್ತ ಸಿದ್ಧತೆ ನಡೆಸಿದೆಂದೂ ಆ ರೀತಿ ಪರಿಪತ್ರ ಹೊರಟವೆಂದೂ ಜಿನ್ನಾರ ಆರೋಪ. ಇದು ಕೇವಲ ಕಾಲ್ಪನಿಕವೆಂದೂ ಬೇರೆ ಹೇಳಬೇಕಿಲ್ಲ- ಜಿನ್ನಾರ ಇದಕ್ಕೂ ಮಹತ್ವದ ಆರೋಪವೆಂದರೆ ೧೯೪೨ ರಲ್ಲಿ ಕಾಂಗ್ರೆಸು ಹೂಡಿದ ಚಳವಳಿ ಬ್ರಿಟಿಶ್‌ರ ವಿರುದ್ಧ ಇರದೆ ಮುಸ್ಲಿಂ ಲೀಗನ್ನು ಕಡೆಗಾಣಿಸಿ ಕಾಂಗ್ರೆಸ್ ಬೇಡಿಕೆಗಳನ್ನು ಒಪ್ಪಲು ಬ್ರಿಟಿಶ್ ಸರಕಾರವನ್ನು ಒತ್ತಾಯಪಡಿಸುವದೆ ಅದರ ಧೋರಣವಾಗಿತ್ತೆಂಬದು. ಇದು ಕೇವಲ ಮಿಥ್ಯಾರೋಪವೆಂಬುದು ಸ್ಪಷ್ಟವಿದೆ. ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿಯೆ ಕಾಂಗ್ರೆಸ್ಸು ಈ ವರೆಗೆ ಹೋರಾಡಿದ್ದು ಮುಂದೆಯಾದರೂ ಹೋರಾಡುವದು. ಇಂಥದೊಂದು ಪಕ್ಷವನ್ನು ಹತ್ತಿಕ್ಕಲು ಕಾಂಗ್ರೆಸ್ಸು ಎಂದೂ ಪ್ರಯತ್ನಿಸಿಲ್ಲ. ಕಾಂಗ್ರೆಸಿನ ಬಗ್ಗೆ ಜಿನ್ನಾರು ಇಂತು ಅಪಪ್ರಚಾರ ಮಾಡುವುದನ್ನು ಬಿಟ್ಟುಗೊಟ್ಟಷ್ಟು ಒಳಿತು. ಯಾರೊಬ್ಬರ ವಿರುದ್ಧ ತಮ್ಮ ಈ ಹೋರಾಟವಿಲ್ಲೆಂದೂ ಆತ್ಮರಕ್ಷಣೆಗಾಗಿಯೆ ಈ ಬಗೆಯ ಧೋರಣ ಸ್ವೀಕರಿಸಲಾಗಿದೆಂದೂ ಜಿನ್ನಾರವರು ಸ್ಪಷ್ಟಪಡಿಸಿರುವರು. ಮುಸ್ಲಿಂ ಲೀಗು ತನ್ನ ಹೋರಾಟದ ಕಾರ್ಯಕ್ರಮವನ್ನು ಇನ್ನೂ ಗೊತ್ತುಪಡಿಸಿಲ್ಲ ಎರಡು ತಿಂಗಳ ನಂತರ ಎಲ್ಲ ಬಗೆಯ ಸಿದ್ಧತೆ ಮಾಡಿಕೊಂಡು ಅದನ್ನು ಗೊತ್ತುಪಡಿಸುವದಂತೆ. ಅದೇನೇ ಇದ್ದರೂ ಲೀಗಿನ ಈ ಧೋರಣದಿಂದ ಮುಸಲ್ಮಾನರ ಇಲ್ಲವೆ ಹಿಂದುಸ್ತಾನದ ಕಲ್ಯಾಣವಾಗದೆಂಬುದು ನಿಶ್ಚಿತ.

## ಮದ್ರಾಸದ ಮುನ್ನಡೆ

ಮದ್ರಾಸ ಸರಕಾರದ ಅರ್ಥಸಚಿವರಾದ ಶ್ರೀ ಟಿ. ಪ್ರಕಾಶಮರು ಶಾಸನ ಸಭೆಯಲ್ಲಿ ಒಪ್ಪಿಸಿದ ೧೯೪೬-೪೭ನೇ ಇಸ್ವಿಯ ಮುಂಗಡ ಪತ್ರಿಕೆ ಪ್ರಗತಿಪರವಾಗಿದೆ. ಪ್ರತಿಯೊಂದು ಜಿಲ್ಲೆಯಲ್ಲಿಯ ಫಿರಕಾಗಳನ್ನು ಆಹಾರ ಮತ್ತು ಬಟ್ಟೆಯ ವಿಷಯದಲ್ಲಿ ಸ್ವಯಂಪೂರ್ಣ ಮಾಡಲು, ಗ್ರಾಮ ಪುನರ್ಘಟನೆ ಹಾಗು ಉತ್ಪಾದನೆಗೆ ೯ ಕೋಟಿ ರೂಪಾಯಿ, ಹರಿಜನ ಉದ್ಧಾರಕ್ಕಾಗಿ ೧ ಕೋಟಿ ರೂಪಾಯಿ, ನಾಲ್ಕು ಜಿಲ್ಲೆಗಳಲ್ಲಿ ಪಾನಪ್ರತಿಬಂಧವನ್ನು ಪೂರ್ತಿ ಜಾರಿಯಲ್ಲಿ ತರಲು ೫೦ ಕೋಟಿ ರೂಪಾಯಿ ತೆಗೆದಿಟ್ಟಿರುವುದು ಮುಖ್ಯ ವೈಶಿಷ್ಟ್ಯಗಳಾಗಿರುವುವು. ಪೂರ್ಣ ಮದ್ಯಪಾನ ಪ್ರತಿಬಂಧದಿಂದ ಸರಕಾರಕ್ಕೆ ವರ್ಷಕ್ಕೆ ೧೭॥ ಕೋಟಿ ರೂಪಾಯಿ ಉತ್ಪನ್ನವಿಲ್ಲದಂತಾಗುವುದು. ಸದ್ಯದಲ್ಲಿ ಅನೇಕ ಕಡೆ ಆಹಾರ ಬಟ್ಟೆಗಳ ಕೊರತೆಯಿಂದ ಜನ ಬಳಲುತಿದೆ. ಅಂತೆಯೆ ಪ್ರಾತಿನಿಧಿಕ ಸರಕಾರದವರು ಈ ಕೊರತೆಯನ್ನು ಹೋಗಲಾಡಿಸುವುದಕ್ಕಾಗಿ ಹೆಚ್ಚು ಪರಿಶ್ರಮಪಡುತಿರುವರು. ಅದಕ್ಕಾಗಿ ಹಣವನ್ನು ಪ್ರತ್ಯೇಕವಾಗಿ ತೆಗೆದಿಡುತಿರುವರು. ಇದು ಅಭಿನಂದನೀಯ ಸಂಗತಿ. ಸರಕಾರದ ಈ ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಬೇಕಾದರೆ ಜನತೆಯ ಹಾರ್ದಿಕ ಸಹಕಾರ ಅತ್ಯವಶ್ಯ. ಆಹಾರ ಬಟ್ಟೆಗಳ ಕೊರತೆಗೆ ಕಳ್ಳಪೇಟೆ, ಅವಾಸ್ತವ ಸಂಗ್ರಹ ಮೊದಲಾದವು ಕಾರಣವೆಂದು ಬೇರೆ ಹೇಳಬೇಕಿಲ್ಲ. ಪ್ರತಿಯೊಂದು ಕುಟುಂಬದವರು ತಮಗೆ ಬೇಕಾಗುವಷ್ಟೆ ಧಾನ್ಯ ಬಟ್ಟೆ ಸಂಗ್ರಹಿಸಿದರೆ ಮತ್ತು ವ್ಯಾಪಾರಸ್ಥರು ಕಳ್ಳಪೇಟೆಗಳಸದಿದ್ದರೆ ಕೊರತೆಯೆ ಆಗದು ಇದನ್ನರಿತು ಎಲ್ಲರೂ ಸರಕಾರದಗೂಡ ಸಹಕರಿಸಬೇಕು. ಪಾನನಿರೋಧ ಕಾರ್ಯಕ್ರಮವನ್ನು ಸರಕಾರ ಮತ್ತೆ ಕೈಕೊಂಡುದು ಅಭಿನಂದನೀಯವಾಗಿದೆ. ಕಾಂಗ್ರೆಸ ಸರಕಾರ ಈ ಮೊದಲು ಪಾನನಿರೋಧ ಕಾರ್ಯಕ್ರಮವನ್ನು ಜಾರಿಯಲ್ಲಿ ತಂದಿತ್ತು ಆದರೆ ಸಲಹೆಗಾರ ಸರಕಾರ ಅದನ್ನು ಬಿಟ್ಟುಗೊಟ್ಟಿತು. ಇದರಿಂದ ಕುಡುಕತನ ಮತ್ತೆ ಹೆಚ್ಚಿದೆ. ಇದರಿಂದ ಜನತೆಯ ಹಾನಿ ಎಷ್ಟಾಗುತಿದೆಂಬುದನ್ನು ಬೇರೆ ಹೇಳಬೇಕಿಲ್ಲ. ಹಣದಾಸೆಯಿಂದ ಸರಕಾರ ಜನರನ್ನು ಕುಡಿಯಲು ಹಚ್ಚಿ ಅವರ ಹಣವನ್ನೂ ನೀತಿಯನ್ನೂ ಹಾಳು ಮಾಡುವದು ನ್ಯಾಯ್ಯವಲ್ಲ. ಕೆಲ ವಿಶಿಷ್ಟ ಹಿತಸಂಬಂಧದವರು ಪಾನನಿರೋಧಕ್ಕೆ ವಿರೋಧ ಮಾಡುವುದುಂಟು. ಇದು ಕೇವಲ ಸ್ವಾರ್ಥ. ಅದುದರಿಂದ ಇಂಥ ಸ್ವಾರ್ಥಕ್ಕೊಳಗಾಗದೆ ಪಾನನಿರೋಧದಂಥ ಪವಿತ್ರ ಕಾರ್ಯದಲ್ಲಿ ಎಲ್ಲರೂ ಸಹಕರಿಸಬೇಕು. ಮದ್ರಾಸ ಸರಕಾರದ ಈ ಯೋಜನೆಗಳು ಯಶಸ್ವಿಯಾಗಲಿ.

## ಅನುಚಿತ ನೇಮಕ

ಮೈಸೂರಿನ ದಿವಾನರಾದ ಪ್ರಧಾನ ಶಿರೋಮಣಿ ಎನ್. ಮಾಧವರಾಯರು ನಿವೃತ್ತರಾಗಲು ಬಯಸಿದುದರಿಂದ ಶ್ರೀ ಮನ್ಮಹಾರಾಜರು ಅವರಿಗೆ ಅಗಸ್ಟ ೭ ರಿಂದ ನಿವೃತ್ತರಾಗಲು ಅನುಮತಿ ಕೊಟ್ಟಿದ್ದಾರೆ. ಆ ದಿನ ದಿವಾನ ಬಹಾದ್ದೂರ ಸರ್ ಅರ್ಕಾಟ ರಾಮಸ್ವಾಮಿ ಮುದ್ಲಿಯಾರರವರು ಮೈಸೂರಿನ ದಿವಾನಗಿರಿಯನ್ನು ವಹಿಸಿಕೊಳ್ಳುವರೆಂದು ಮೈಸೂರು ಸರಕಾರದ ಚೀಫ ಸೆಕ್ರೆಟರಿಯವರು ಪತ್ರಿಕಾ ಪ್ರಕಟನೆ ಹೊರಡಿಸಿರುವರು. ಸರ್ ರಾಮಸ್ವಾಮಿಯವರ ನೇಮಕದ ಸುದ್ದಿ ಈ ಮೊದಲೆ ಹರಡಿದ್ದರಿಂದ ಮೈಸೂರಿನ ಪ್ರಮುಖರು ಸಂಘ ಸಂಸ್ಥೆಗಳು ಆ ಬಗ್ಗೆ ತಮ್ಮ ಅಸಮ್ಮತಿಯನ್ನೂ ಅಸಂತೋಷವನ್ನೂ ವ್ಯಕ್ತಪಡಿಸಿದ್ದರು. ಸರ್ ರಾಮಸ್ವಾಮಿಯವರು ಹಿಂದುಸ್ತಾನ ಸರಕಾರದ ಕೆಲಸದಲ್ಲಿರುವಾಗ ಹೌದಪ್ಪರೆಂದೂ ಅತ್ಯಂತ ಪ್ರತಿಗಾಮಿಗಳೆಂದೂ ದುಷ್ಕೀರ್ತಿಯನ್ನು ಪಡೆದಿರುವರು. ಇವರ ವಿಚಿತ್ರ ಧೋರಣದಿಂದ ರಾಜಪ್ರಜರಲ್ಲಿ ಮತಭೇದ ಅಸಂತೋಷ ಹುಟ್ಟುವವೆಂದೂ ಇವರ ಕೀರ್ತಿ! ಅಲ್ಲದೆ ಮೈಸೂರಿನವರಲ್ಲಿ ಇವರು ಈಗೇನೋ ಕೆಲ ಆಸ್ತಿಯನ್ನು ಮೈಸೂರಿನಲ್ಲಿ ಕೊಂಡಿರುವರಂತೆ. ಇಷ್ಟರಿಂದಲೆ ಅವರು ಮೈಸೂರಿನ ಪ್ರಜೆಗಳಾಗಲಾರರು. ಅವರೇನೋ ಮುತ್ಸದ್ದಿಗಳೆರಬಹುದು. ಆಡಳಿತದ ಅನುಭವ ಪಡೆದವರಿರಬಹುದು. ಆದರೆ ಮೇಲೆ ಹೇಳಿದ ಕಾರಣಗಳಿಗಾಗಿ ಅವರನೇಮಕ ಅನುಚಿತವೆಂದೇ ಹೇಳಬೇಕಾಗುತ್ತದೆ. ಅಂತೆಯೇ ಮೈಸೂರಿನ ಪ್ರಜರು ಈ ಬಗ್ಗೆ ಅಸಮ್ಮತಿಯನ್ನೂ ಅಸಂತೋಷವನ್ನೂ ವ್ಯಕ್ತಪಡಿಸಿದ್ದಾರೆ. ಮೈಸೂರು ಸರಕಾರವು ಅರಮನೆಯ ಒಳಸಂಚಿಗೊಳಗಾಗಿದೆಂದು ಮೊದಲೇ ದೂರು. ಅವರಲ್ಲಿಯೂ ಇಂಥ 'ಹೌದಪ್ಪ'ನವರ ನೇಮಕದಿಂದ ಅದಕ್ಕೆ ಮತ್ತಷ್ಟು ಬೆಂಬಲ ಸಿಕ್ಕುತ್ತದೆ. ರಾಮಸ್ವಾಮಿಯವರ ಆಳಿಕೆ ಯಶಸ್ವಿಯಾಗಬೇಕಾದರೆ ಅವರು ಹಿಂದಿನ ಧೋರಣವನ್ನು ಬದಲಿಸಿ ಪ್ರಜಾಮತದಂತೆ ಆಡಳಿತ ಸಾಗಿಸುವದವಶ್ಯವೆಂದು ಬೇರೆ ಹೇಳಬೇಕಿಲ್ಲ.

# ಮುಸ್ಲಿಂ ಲೀಗು ಮಂತ್ರಿತ್ರಯರ ಯೋಜನೆಯನ್ನು ತಿರಸ್ಕರಿಸಿತು

## ದಿಲ್ಲಿಯಲ್ಲಿ ಒಪ್ಪಿದ್ದನ್ನು ಮುಂಬಯಿಯಲ್ಲಿ ಹಿಂತೆಗೆದುಕೊಳ್ಳಲಾಯಿತು— ಬ್ರಿಟಿಶ ಮಂತ್ರಿಗಳ ಮತ್ತು ಕಾಂಗ್ರೆಸ್ಸಿನ ಮೇಲೆ ನಿರಾಧಾರ ಆರೋಪ— ಪ್ರತ್ಯಕ್ಷ ಹೋರಾಟ ಹೂಡುವ ಯೋಜನೆ— ಅಸ್ಪೃಶ್ಯರನ್ನು ಎಳೆದುಕೊಳ್ಳುವ ಪ್ರಯತ್ನ

ಅಖಿಲ ಭಾರತ ಮುಸ್ಲಿಂ ಲೀಗ್ ಕೌನ್ಸಿಲ್ಲು ಕಳೆದ ವಾರ ಮುಂಬಯಿಯಲ್ಲಿ ಸಭೆ ಸೇರಿ, ಬ್ರಿಟಿಶ ಮಂತ್ರಿತ್ರಯದ ದೀರ್ಘಾವಧಿ ಹಾಗು ಅಲ್ಪಾವಧಿ ಯೋಜನೆಗೆ ಹಿಂದೆ ದಿಲ್ಲಿಯಲ್ಲಿ ಲೀಗು ಸಮ್ಮತಿ ಕೊಟ್ಟಿದ್ದನ್ನು ಹಿಂತೆಗೆದುಕೊಂಡು ಪುನಃ ಹಿಂದೀ ರಾಜಕೀಯ ಆಕಾಶದಲ್ಲಿ ಕಾರ್ಮೋಡಗಳನ್ನು ಕಲಕಿದೆ.

ಇದಲ್ಲದೆ ಪಾಕಿಸ್ತಾನವನ್ನು ಸಾಧಿಸುವ ಸಲುವಾಗಿ ಪ್ರತ್ಯಕ್ಷ ಹೋರಾಟವನ್ನು ಕೈಕೊಳ್ಳಬೇಕೆಂದು ನಿರ್ಣಯಿಸಿ ಅದಕ್ಕೋಸ್ಕರ ವಿವರವಾದ ಯೋಜನೆಯನ್ನು ಸಿದ್ಧಗೊಳಿಸಲು ೫ ಜನರಿಗಿಂತ ಕಡಿಮೆ ೭ ಜನರಿಗಿಂತ ಹೆಚ್ಚು ಇಲ್ಲದ ಕ್ರಿಯಾಸಮಿತಿಯನ್ನು ರಚಿಸಲು ಕಾಯದೆ-ಅಝುಮ ಜಿನ್ನಾರವರಿಗೆ ಅಧಿಕಾರ ಕೊಡಲಾಗಿದೆ.

ಬ್ರಿಟಿಶರು "ಮುಸ್ಲಿಂ ರಾಷ್ಟ್ರ"ಕ್ಕೆ ಮಾಡಿದ ವಿಶ್ವಾಸಘಾತವನ್ನು ಪ್ರತಿಭಟಿಸುವ ಸಲುವಾಗಿ ಮುಸ್ಲಿಮರು ಬಿರುದು ಬಾವಲಿಗಳನ್ನು ತ್ಯಜಿಸಬೇಕೆಂದೂ ಆದೇಶ ಕೊಡಲಾಗಿದೆ.

ದಿಲ್ಲಿಯಲ್ಲಿ ಮಾಡಿದ ಸ್ವೀಕಾರ ನಿರ್ಣಯವನ್ನು ಈಗ ತಲೆ ಕೆಳಗು ಮಾಡಲು ಮುಖ್ಯವಾಗಿ, ಜಿನ್ನಾರ ಭಾಷೆಯಲ್ಲಿ ಹೇಳಬೇಕಾದರೆ, ಮಂತ್ರಿತ್ರಯ ರಾಯಭಾರದ "ವಿಶ್ವಾಸಘಾತಕ" ನೀತಿಯೇ ಕಾರಣವೆಂದು ತೋರುತ್ತದೆ. ಯಾವದೊಂದು ಪಕ್ಷವಾದರೂ ಯೋಜನೆಯನ್ನು ಒಪ್ಪದಿದ್ದರೆ ಸಹ ಇನ್ನೊಂದು ಪಕ್ಷವನ್ನು ಕಟ್ಟಿಕೊಂಡು ನಡುಗಾಲ ಸರಕಾರವನ್ನು ರಚಿಸುವದಾಗಿ ಮೊದಲು ಮಾತು ಕೊಟ್ಟು ಆ ಮೇಲೆ ಅದರಂತೆ ಆಚರಿಸಲು ತಪ್ಪಿದ್ದು ಮೊದಲಿಂದಲೂ ಜಿನ್ನಾ ಸಾಹೇಬರ ಟೀಕೆಗೊಳಗಾಗಿತ್ತು. ಆದರೆ ಬ್ರಿಟಿಶರ ಮೇಲಿನ ಈ ಸಿಟ್ಟನ್ನು ಕಾಂಗ್ರೆಸ್ಸಿನ ಮೇಲೆ ತೀರಿಸಿಕೊಳ್ಳಲು ಜಿನ್ನಾ ಸಾಹೇಬರು ಪ್ರಯತ್ನಿಸಿದ್ದಾರೆ. ಕಾಂಗ್ರೆಸ್ಸಿನ ಮೇಲೆ ವಿಸಂಗತ ಟೀಕೆಗಳ ಮಳೆಗರೆಯಲು ಅವರೂ ಅವರ ಬೆಂಬಲಿಗರೂ ಹಿಂದೆಮುಂದೆ ನೋಡಲಿಲ್ಲ. ಕಾಂಗ್ರೆಸ್ಸು ಬ್ರಿಟಿಶರೊಡನೆ ಸೇರಿಕೊಂಡು ಮುಸ್ಲಿಂ ಲೀಗಿನ ವಿರುದ್ಧ ಒಳಸಂಚು ನಡೆಸಿತೆಂದು ಅವರು ಆರೋಪಿಸಿದ್ದಾರೆ.

### ಗೊತ್ತುವಳಿ

ಬ್ರಿಟಿಶ ಯೋಜನೆಗಳನ್ನು ತಿರಸ್ಕರಿಸುವ ಲೀಗ ಕೌನ್ಸಿಲ್ಲಿನ ನಿರ್ಣಯ ಬಹಳ ದೀರ್ಘವಾಗಿದೆ. ದಿಲ್ಲಿ ಮಾತುಕತೆಗಳಲ್ಲಿ ಲೀಗು ದೀರ್ಘಕಾಲದ ಯೋಜನೆಯನ್ನು ಒಪ್ಪಿಕೊಳ್ಳಲು, ನಡುಗಾಲ ಸರಕಾರದ ಬಗ್ಗೆ ಮೊದಲೆ ಬ್ರಿಟಿಶ ಮಂತ್ರಿಗಳು ಅವರಿಗೆ ತೋರಿಸಿದ ನಡುಗಾಲ ಯೋಜನೆ ಅಂದರೆ ೫ ಕಾಂಗ್ರೆಸ್, ೫ ಮುಸ್ಲಿಂ ಲೀಗ್, ೧ ಸೀಖ, ೧ ಆಂಗ್ಲೋ ಇಂಡಿಯನ್ ಅಥವಾ ಕ್ರಿಶ್ಚನ್ ರಿಂದೊಡಗೂಡಿದ ನಡುಗಾಲ ಸರಕಾರದ ಯೋಜನೆ ಆಧಾರವಾಗಿತ್ತು. ಅದಲ್ಲದೆ ಬ ಮತ್ತು ಕ ಗುಂಪುಗಳನ್ನು ಮಾಡಿಕೊಳ್ಳಲು ಮುಸ್ಲಿಂ ಪ್ರಾಂತಗಳಿಗೆ ಅವಕಾಶವಿತ್ತದ್ದರಿಂದ ಹಿಂದೂ-ಮುಸ್ಲಿಂ ಬಿಕ್ಕಟ್ಟನ್ನು ಬಿಡಿಸಲು ಒಂದು ಅವಕಾಶ ಕೊಟ್ಟದ್ದೂ ಅದಕ್ಕೆ ಕಾರಣವಾಗಿತ್ತು. ಆದರೆ ನಡುಗಾಲ ಸರಕಾರದಯೋಜನೆಯ ವಾಗ್ದಾನವನ್ನು, ಕಾಂಗ್ರೆಸ್ಸನ್ನು ಸಂತೋಷಗೊಳಿಸುವ ಸಲುವಾಗಿ, ವಾಯಿಸರಾಯರೂ ಮಂತ್ರಿತ್ರಯವೂ ಹಿಂತೆಗೆದುಕೊಂಡು ಭಾಷೆಗೆ ತಪ್ಪಿದ್ದಾರೆ. ಕಾಂಗ್ರೆಸ್ ಲೀಗುಗಳೆರಡೂ ದೀರ್ಘಕಾಲದ ಯೋಜನೆಯನ್ನು ಒಪ್ಪಿಕೊಂಡದ್ದರಿಂದ ಉಭಯ ಪಕ್ಷಗಳೊಡನೆ ಹೊಸತಾಗಿ ಮಾತುಕತೆ ನಡೆಸಿಯೆ ನಡುಗಾಲ ಸರಕಾರ ರಚಿಸಬೇಕಾಗಿದೆಯೆಂದು ಬ್ರಿಟಿಶರು ಕೊಡುವ ಕಾರಣ ಅರ್ಥರಹಿತವಾಗಿದೆ. ಕಾಂಗ್ರೆಸು ದೀರ್ಘಕಾಲದ ಯೋಜನೆಯನ್ನು, ನಿಜವಾಗಿ ನೋಡಿದರೆ, ಒಪ್ಪಿಯೇ ಇಲ್ಲ. ಅದು ಅದರ ಕಲಮುಗಳಿಗೆ ತನ್ನದೇ ಅರ್ಥವನ್ನು ಹಚ್ಚಿಕೊಂಡು ತನ್ನದೇ ಕುಂಟುಪಂತಿಗಳನ್ನಿಟ್ಟುಕೊಂಡು ಯೋಜನೆಗೆ ಒಪ್ಪಿದಂತೆ ಮಾಡಿದೆ. ಅ. ಭಾ. ಕಾಂಗ್ರೆಸ್ ಸಮಿತಿಯಲ್ಲಿ ಮಾಡಿದ ಭಾಷಣಗಳಲ್ಲಿ ಕಾಂಗ್ರೆಸ್ಸು ಘಟನಾ ಸಮಿತಿಯಲ್ಲಿ ಪ್ರವೇಶಿಸಲು ಒಪ್ಪಿದೆ ಹೊರತು ಮತ್ತಾವುದಕ್ಕೂ ಬದ್ಧವಾಗಿಲ್ಲವೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿತು. ಬದಲಾಗಿ ಘಟನಾ ಸಮಿತಿ ಸಾರ್ವಭೌಮ ಸಂಸ್ಥೆಯಾಗಿದ್ದು ತನಗೆ ಬೇಕಾದಂತೆ ನಿರ್ಣಯಗಳನ್ನು ಮಾಡಬಲ್ಲ ಸಂಸ್ಥೆಯೆಂದು ಹೇಳಲಾಯಿತು. ಯೋಜನೆಯ ಮೂಲಭೂತ ತತ್ವಗಳಿಗೆ ಕಾಂಗ್ರೆಸು ಒಪ್ಪಿಲ್ಲವೆಂದೇ ಇದರ ಅರ್ಥವಾಗುತ್ತದೆ. ಅದ್ದರಿಂದ ಮುಸ್ಲಿಂಲೀಗೊಂದೇ ಯೋಜನೆಯನ್ನೊಪ್ಪಿದಂತಾಗಿದೆ. ಕಾಂಗ್ರೆಸ್ಸು ತನ್ನ ಬಹುಮತದ ಬಲದಿಂದ ಘಟನಾ ಸಮಿತಿಯಲ್ಲಿ ಮನಸುಬಂದಂತೆ ಅಧಿಕಾರಬಾಹಿರ ನಿರ್ಣಯಗಳನ್ನು ಮಾಡದಂತೆ ತಡೆಯಲಾಗುವದೆಂದು ಬ್ರಿಟಿಶ ಮಂತ್ರಿಗಳು ಆಶ್ವಾಸನೆ ಕೊಡಲು ತಪ್ಪಿದ್ದಾರೆ. ಹೀಗಿರಲು ಕಾಂಗ್ರೆಸ್ಸು ಯೂನಿಯನ್ ಕೇಂದ್ರದ ಅಧಿಕಾರ ವ್ಯಾಪ್ತಿಯನ್ನೂ ಗುಂಪುಗಳ ಘಟನೆಯ ಮೂಲಭೂತ ಸ್ವರೂಪವನ್ನೂ ವಿಕೃತಗೊಳಿಸದಂತೆ ತಡೆಯುವ ಉಪಾಯವೇ ಇಲ್ಲ. ಈ ಪ್ರಕಾರ ಸಹಕಾರದಿಂದ ಸಾಗಿದರೆ ಮಾತ್ರ ಸಾಧ್ಯವಾಗುವ ಘಟನಾ ಸಮಿತಿಯ ಯಶಸ್ವಿತೆಗೆ ಅನುಕೂಲವಾದ ಪರಿಸ್ಥಿತಿಯೇ ಇಲ್ಲದ್ದರಿಂದಲೂ ಕಾಂಗ್ರೆಸ್ಸನ್ನು ಸಂತುಷ್ಟಗೊಳಿಸಲು ಮುಸ್ಲಿಂ ರಾಷ್ಟ್ರ ಮತ್ತು ದಲಿತ ವರ್ಗಗಳಂಥ ಇತರ ದುರ್ಬಲ ಜನರ ಹಿತವನ್ನು ಬಲಿಗೊಡುವದೆ ಬ್ರಿಟಿಶ ಸರಕಾರದ ಧೋರಣವಿರುವದರಿಂದಲೂ ಘಟನಾಸಮಿತಿಯಲ್ಲಿ ವಿಭಾಗ ವಹಿಸುವದರಲ್ಲಿ ಮುಸ್ಲಿಮರಿಗೆ ಗಂಡಾಂತರವಿದೆ. ಅದು ಕಾರಣ ಬ್ರಿಟಿಶ ಮಂತ್ರಿಗಳ ಯೋಜನೆಗೆ ಕೊಟ್ಟ ಒಪ್ಪಿಗೆಯನ್ನು ಲೀಗ್ ಕೌನ್ಸಿಲ್ಲು ಹಿಂತೆಗೆದುಕೊಳ್ಳುತ್ತದೆ.

### ಹೋರಾಟದ ಗೊತ್ತುವಳಿ

ಹೋರಾಟದ ಗೊತ್ತುವಳಿಯಲ್ಲಿ ಕಾಂಗ್ರೆಸ್ಸು ಹಿಂದುಸ್ತಾನದಲ್ಲಿ ಸವರ್ಣ ಹಿಂದೂ ರಾಜ್ಯವನ್ನು ಸ್ಥಾಪಿಸಲೆಳಸುವದರಿಂದ ಮತ್ತು ಬ್ರಿಟಿಶರು ವಚನಭಂಗ ಮಾಡಿರುವದರಿಂದ ಮತ್ತು ಹಿಂದುಸ್ತಾನದ ಘಟನಾತ್ಮಕ ಬಿಕ್ಕಟ್ಟನ್ನು ಶಾಂತರೀತಿಯಿಂದ ಬಿಡಿಸಲು ಪ್ರಯತ್ನಿಸಿ ಹಿಂದೀ ಮುಸ್ಲಿಮರು ಬೇಸತ್ತು ಹೋಗಿರುವದರಿಂದ ಸಂಪೂರ್ಣ ಸ್ವತಂತ್ರ ಪಾಕಿಸ್ತಾನವನ್ನು ಸ್ಥಾಪಿಸಿಕೊಂಡು ಮುಸ್ಲಿಂ ರಾಷ್ಟ್ರದ ಗೌರವವನ್ನು ರಕ್ಷಿಸಿ ಬ್ರಿಟಿಶ ಮತ್ತು ಸವರ್ಣ ಹಿಂದೀಯರ ದಬ್ಬಾಳಿಕೆಯನ್ನು ದೂರೀಕರಿಸುವಗೋಸ್ಕರ ಪ್ರತ್ಯಕ್ಷ ಹೋರಾಟವನ್ನು ಕೈಕೊಳ್ಳುವ ಸಮಯವಿದೀಗ ಬಂದಿದೆ. ಅದು ದರಿಂದ ಹೋರಾಟದ ಯೋಜನೆಯನ್ನು ಸಿದ್ಧಗೊಳಿಸಲು ಕಾರ್ಯಸಮಿತಿಯನ್ನು ಈ ಮೂಲಕ ಕೇಳಿಕೊಳ್ಳಲಾಗಿದೆ. ಮತ್ತು ಮುಂಬರುವ ಹೋರಾಟದಲ್ಲಿ ಮುಸ್ಲಿಂ ಲೀಗಿನ ಬೆಂಬಲಕ್ಕೆ ಐಕ್ಯಮತ್ಯದಿಂದ ಎದ್ದು ನಿಲ್ಲಬೇಕೆಂದು ಮುಸ್ಲಿಮರಲ್ಲಿ ಪ್ರಾರ್ಥಿಸಲಾಗಿದೆ. ಬ್ರಿಟಿಶರ ಧೋರಣೆಯ ಬಗ್ಗೆ ಮುಸ್ಲಿಮರಲ್ಲುಂಟಾಗಿರುವ ದ್ವೇಷದ ದ್ಯೋತಕವಾಗಿ ಮುಸ್ಲಿಮರು ಒಡನೆ ತಮ್ಮ ಬಿರುದು ಬಾವಲಿಗಳನ್ನು ಬಿಟ್ಟುಕೊಡಬೇಕೆಂದು ಕೇಳಿಕೊಳ್ಳಲಾಗಿದೆ— ಎಂದು ಹೇಳಲ್ಪಟ್ಟಿದೆ.

### ಉದ್ರೇಕದ ಭಾಷೆ

ಈ ಗೊತ್ತುವಳಿಗಳನ್ನು ಪಾಸುಮಾಡುವ ಮೊದಲು ಅತ್ಯಂತ ಉದ್ರೇಕಪೂರ್ಣ ಭಾಷೆಯನ್ನು ಪಯೋಗಿಸಿ ಭಾಷಣಗಳಾದವು. ಹಿಂದುಸ್ತಾನದ ಹಿತದೃಷ್ಟಿಯಿಂದ ಪಾಕಿಸ್ತಾನ ಬೇಡಿಕೆಯನ್ನು ಹತ್ತುವರ್ಷ ಮುಂದೆ ಹಾಕಲು ಲೀಗು ಒಪ್ಪಿತು ಆದರೆ ಕಾಂಗ್ರೆಸ್ಸು ಲೀಗಿನ ಈ ತ್ಯಾಗವನ್ನು ಗಮನಿಸದೆ ಅದನ್ನು ಬಗ್ಗುಬಡಿಯಲು ಮುಂದಾಯಿತು ಎಂದು ಕಾಂಗ್ರೆಸ್ಸಿನ ಮೇಲೆ ಆರೋಪ ಹೊರಿಸಲಾಯಿತು. ಜಿನ್ನಾ ಸಾಹೇಬರೂ ಅನೇಕ ಭಾಷಣಕಾರರೂ ಕಾಂಗ್ರೆಸ್ಸನ್ನೂ ಬ್ರಿಟಿಶ ಮಂತ್ರಿಗಳನ್ನೂ ಅತ್ಯಂತ ಹೇಯ ವಚನಗಳಿಂದ ತೆಗಳಿದರು. ರಕ್ತಪಾತ, ತ್ಯಾಗ, ಧರ್ಮಯುದ್ಧಗಳ ಮಾತು ಸಿಡಿದವು. ಕಾಂಗ್ರೆಸ್ಸು ಇಷ್ಟು ದೊಡ್ಡ ಸಂಸ್ಥೆಯಾಗಿದ್ದರೂ ಅದಕ್ಕೆ ಮೆದುಳಿಲ್ಲೆಂದು ಖಲೀಕುಝಮಾನರು ಲೇವಡಿ ಮಾಡಿದರು. ಕಾಂಗ್ರೆಸ್ಸಿನೊಡನೆ ಸಹಕರಿಸುವ ಪ್ರಯತ್ನಗಳು ನಿಷ್ಫಲವೆಂದು ಹೇಳಲಾಯಿತು. ಶಾಸನ ಸಭೆಗಳನ್ನು ಬಹಿಷ್ಕರಿಸಬೇಕೆಂದು ಕೆಲವರೆಂದರು. ಪಾಕಿಸ್ತಾನದ ಬೇಡಿಕೆಯನ್ನು ಮುಂದೆ ತಳ್ಳಿದ್ದೇ ತಪ್ಪು ಈಗ ಅದನ್ನು ತಿದ್ದಿಕೊಳ್ಳೋಣ ಎಂದರು ಫಿರೋಜಖಾನ ನೂನ. "ಇಂದು ನಾವು ಕಾಯಿದೆಬದ್ಧ ಪದ್ಧತಿಗೆ ಶರಣು ಹೊಡೆದಿದ್ದೇವೆ. ಈಗ ನಾವು ಬ್ರಿಟಿಶರ ಎದೆಗೆ ಪಿಸ್ತೂಲು ಹಿಡಿದಿದ್ದೇವೆ. ಬ್ರಿಟಿಶ ಮಂತ್ರಿ ರಾಯಭಾರಿಗಳ ಬೌದ್ಧಿಕ ದೌರ್ಬಲ್ಯ ನಮಗೆ ಪ್ರಚ್ಛನ್ನ ಸುದೈವವಾಗಿ ಬಂದಿದೆ" ಎಂದರು ಜಿನ್ನಾ ಸಾಹೇಬರು.

### ಎರಡು ತಿಂಗಳಲ್ಲಿ ಹೋರಾಟ ?

ಈ ಬಗೆಯ ಉಗ್ರ ಭಾಷೆ ಇನ್ನೂ ಸಾಗಿಯೆ ಇದೆ. "ಬ್ರಿಟಿಶರು ಅಧಿಕಾರ ಮತ್ತು ಆಯುಧ ಶಕ್ತಿಯ ಪಿಸ್ತೂಲು ಹಿಡಿದಿದ್ದರು, ಕಾಂಗ್ರೆಸ್ಸು ಅಸಹಕಾರದ ಪಿಸ್ತೂಲು ಹಿಡಿದಿತ್ತು, ಈಗ ನಾವೂ ಪಿಸ್ತೂಲು ಹಿಡಿದಿದ್ದೇವೆ" ಎಂದು ಹೇಳಲಾಗಿದೆ. ಕಾಂಗ್ರೆಸು ಕೂಡ ಇನ್ನೊಂದು ಭಯಂಕರ ಹೋರಾಟದ ಸಿದ್ಧತೆಯನ್ನು ನಡೆಸಿದೆಯೆಂದು ಜಿನ್ನಾರು ಆರೋಪಿಸುತಿದ್ದಾರೆ. ಜಿನ್ನಾರ ಪಿಸ್ತೂಲು ಅಥವಾ ಹೋರಾಟ ಯಾವ ಬಗೆಯದು, ಹೇಗೆ ಯಾವಾಗ ಮೂರ್ತೀಭವಿಸುವದು ಗೊತ್ತಿಲ್ಲ. ಜಿನ್ನಾರು ನೇಮಕ ಮಾಡಲಿರುವ ಕ್ರಿಯಾಸಮಿತಿ ಎರಡು ತಿಂಗಳಲ್ಲಿ ಹೋರಾಟದ ಯೋಜನೆ ಸಿದ್ಧಗೊಳಿಸುವದಂತೆ. ಲೀಗಿನ ಪ್ರಮುಖ ಮುಂದಾಳುಗಳು ದೇಶದಲ್ಲೆಲ್ಲ ಸಂಚರಿಸಿ ಲೀಗಿನ ಗೊತ್ತುವಳಿಗಳ ಅರ್ಥವನ್ನು ಮುಸ್ಲಿಮರಿಗೆ ವಿವರಿಸುವರಂತೆ. ಆ ಮೇಲೆ ಕಾಯಿದೆ ಭಂಗ. ಅದು ಕರನಿರಾಕರಣೆ ಅಥವಾ ಸಾರ್ವತ್ರಿಕ ಕಾಯಿದೆಭಂಗದ ರೂಪವನ್ನು ತಾಳುವದೋ ಯಾವುದಾದರೂ ವಿಶಿಷ್ಟ ಕಾಯಿದೆಗಳನ್ನು ಮುರಿಯಲಾಗುವದೋ ನಿರ್ಣಯವಾಗಿಲ್ಲ. ಈಗ ಪ್ರಾರಂಭವಾಗಿರುವ ಮೊದಲನೆ ಘಟ್ಟವೆಂದರೆ ಬಿರುದು ಬಾವಲಿಗಳ ಪರಿತ್ಯಾಗ. ಸರ್ ಫಿರೋಜಖಾನನೂನ, ಸರ್ ನಾಜೀಮುದ್ದೀನ, ರಾಜಾ ಗಝನಫರಲ್ಲಿ, ಸರ್ ಸಾದುಲ್ಲಾ, ಸರ್ ಗುಲಾಮಹುಸೇನ ಹಿದಾಯತುಲ್ಲಾ ಮೊದಲಾದ ನೂರಾರು ಪ್ರಮುಖರು ಈಗಾಗಲೆ ಬಿರುದುಬಾವಲಿಗಳನ್ನು ತ್ಯಜಿಸಿದ್ದಾರೆ.

### ನಿರ್ಣಯ ಕೊನೆಯದಲ್ಲ ?

ಆದರೆ ಬೆದರುಗುಂಡುಗಳನ್ನುರುಳಿಸುವದರಲ್ಲಿ ಎತ್ತಿದ ಕೈಯಾದ ಲೀಗ ಮುಂದಾಳುಗಳ ಪ್ರತ್ಯಕ್ಷ ಹೋರಾಟದ ಬೆದರಿಕೆಯನ್ನು ಅವರ ಕೃತಿಗಳಿಂದಲೇ ಅಳೆಯ ಬೇಕಾಗುವದು. ಈ ಹೋರಾಟ ಜಾತೀಯ ದಂಗೆಯ ರೂಪ ಧರಿಸುವದಿಲ್ಲವೆಂದು ಬಂಗಾಲ ಮುಖ್ಯಮಂತ್ರಿ ಸುಹ್ರವರ್ದಿಯವರು ಹೇಳಿ ಭಯವೊಂದನ್ನು ನಿವಾರಿಸಿದ್ದಾರೆ. ಆದರೆ ಲೀಗ ಗೊತ್ತುವಳಿಯಲ್ಲಿ ಮತ್ತು ಜಿನ್ನಾ ಸಾಹೇಬರ ಭಾಷಣದಲ್ಲಿ ಹಿಂದೂ ದಲಿತ ವರ್ಗಗಳಿಗಾಗಿ ಹೊಸತೊಂದು ಮರುಕ ತೋರಿ ಬಂದುದು ಅರ್ಥಪೂರ್ಣವಾಗಿದೆ. ಒಮ್ಮಿಂದೊಮ್ಮೆ ಮುಸ್ಲಿಂ ಲೀಗು ಅಸ್ಪೃಶ್ಯರ ಸ್ವಯಂನಿಯುಕ್ತ ವಕೀಲನಾಗಿ ಬಿಟ್ಟಿದೆ. ಡಾ. ಅಂಬೇಡಕರರು, ದಲಿತ ವರ್ಗಗಳಿಗೆ ಸಂರಕ್ಷಣೆ ಕೊಡಲು ಲೀಗು ಒಪ್ಪಿದೆಯೆಂದು ಹೇಳಿದ್ದನ್ನು ಮತ್ತು ಅವರು ಈಚೆಗೆ ಪುಣೆಯಲ್ಲಿ ನಡೆಸಿದ ಸತ್ಯಾಗ್ರಹವನ್ನು ಇಲ್ಲಿ ನೆನೆದುಕೊಳ್ಳಬಹುದು. ಲೀಗು ಹೋರಾಟ ಹೂಡಿ[illegible] ಹೂಡಿದರೆ ಅಂಬೇಡ್ಕರವಾದಿಗಳೂ ಅವರ[illegible] ಸೇರುವರೆ ?

ಆದರೆ ಲೀಗಿನ ಈ ನಿರ್ಣಯ ಎಂದೂ ಹಿಂತೆಗೆದುಕೊಳ್ಳಬಾರದ ನಿರ್ಣಯವೇನೂ ಅಲ್ಲವೆಂದೂ ಹೊಸತಾಗಿ ಇದಿ ಮಾತುಕತೆ ಪ್ರಾರಂಭಿಸಬೇಕೆಂದಿಷ್ಟೇ ಅದರ ಅರ್ಥವೆಂದೂ ಲೀಗ್ ಮುಂದಾಳೊಬ್ಬನು ಹೇಳಿದನೆಂದು ಮುಂಬಯಿ "ಟಾಯಿಮ್ಸ್" ಪತ್ರಿಕೆ ಬರೆದಿದೆ. ಹೊಸತಾಗಿ ಮಾತುಕತೆ ನಡೆದು ಅನುಕೂಲ ನಿರ್ಣಯವಾದರೆ ಲೀಗು ಪುನಃ ತನ್ನ ಈ ನಿರ್ಣಯವನ್ನೂ ಬದಲಿಸಬಹುದು. ಆದರೆ ಈ "ರೆ" ಬಹಳ ದೊಡ್ಡದು. ಮುಸ್ಲಿಂ ಮಂತ್ರಿಗಳನ್ನು ನೇಮಿಸುವ ಗುತ್ತಿಗೆಯನ್ನು ಜಿನ್ನಾರು ಇಂದಿಗೂ ಬಿಟ್ಟುಕೊಡಲು ಸಿದ್ಧರಿಲ್ಲ. ಕಾಂಗ್ರೆಸ್ಸು ಇದಕ್ಕೊಪ್ಪುವ ಸಂಭವವಿಲ್ಲ.

### ಪ್ರತಿಕ್ರಿಯೆಗಳು

ಲೀಗಿನ ಈ ಉಗ್ರ ಮತ್ತು ಐತಿಹಾಸಿಕ ನಿರ್ಣಯದ ಬಗ್ಗೆ ವಾಯಿಸರಾಯರ ಅಥವಾ ಬ್ರಿಟಿಶ ಸರಕಾರದ ಪ್ರತಿಕ್ರಿಯೆ ಇನ್ನೂ ಹೊರಬಿದ್ದಿಲ್ಲ. ಆದರೆ ಅನೇಕ ಬ್ರಿಟಿಶ ಪತ್ರಿಕೆಗಳು ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿವೆ. ಎಲ್ಲ ಕಡೆಗೂ ಸಾಮಾನ್ಯವಾಗಿ ಈ ನಿರ್ಣಯದ ಬಗ್ಗೆ ವಿಷಾದ ವ್ಯಕ್ತಮಾಡಲ್ಪಟ್ಟಿದೆ. ನ್ಯೂಸ್ ಕ್ರಾನಿಕಲ್ ಪತ್ರಿಕೆ ಜಿನ್ನಾರ ಈ ನಿರ್ಣಯವನ್ನು ಟೀಕಿಸಿ ಹಿಂದುಸ್ತಾನವನ್ನು ಯಾದವೀ ಯುದ್ಧದ ಹಾದಿಗೆ ಅವರು ಒಯ್ಯುತಿದ್ದಾರೆಂದು ಹೇಳಿದೆ. ಕಾನ್ಸರ್ವೇಟಿವ ಪತ್ರಿಕೆಗಳು ಈ ಸಂಧಿ ಸಾಧಿಸಿ ಹಿಂದುಸ್ತಾನ ಸ್ವಾತಂತ್ರ್ಯಕ್ಕೆ ಇನ್ನೂ ಸಿದ್ಧವಾಗಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ ಎನ್ನುತಿವೆ. ಪಾರ್ಲಮೆಂಟಿನಲ್ಲಿ ಹಲವು ವರ್ಷಗಳಿಂದ ಹಿಂದುಸ್ತಾನದ ಬಗ್ಗೆ ಬಹಳ ದುಡಿದಿರುವ ರೆಜಿನಾಲ್ಡ ಸೋರೆನ್ಸೇನರು ಇದು ಘಟನಾ ಸಮಿತಿಯನ್ನು ಮುರಿಯುವ ಉದ್ದೇಶಪೂರ್ವಕ ಉಪಕ್ರಮವೆಂದು ಸಾರಿದರು.

ಹಿಂದುಸ್ತಾನದಲ್ಲಿ ಕಾಂಗ್ರೆಸ್ ಪ್ರಮುಖರು ಈ ಬಗ್ಗೆ ಬಹಳ ಸಂಯಮದಿಂದ ಮಾತಾಡುತಿ[illegible] ಅಝಾದರು ಈ ನಿರ್ಣಯದ ಬಗ್ಗೆ ವಿಷಾದ ವ್ಯಕ್ತಗೊಳಿಸಿ ಕಾಂಗ್ರೆಸ್ಸಿನ ಮೇಲೆ ಲೀಗು ಹೊರಿಸಿರುವ ಅಪಾದನೆ ನಿರಾಧಾರವಾದುದೆಂದಿರುವರು. ರಾಜಾಜಿಯವರು ಮಾತ್ರ ಮುಸ್ಲಿಂ ಮುಂದಾಳುಗಳ ಈ ಜಗಳಗಂಟತನವನ್ನು ನಿಷೇಧಿಸಿ, ಸ್ವಾತಂತ್ರ್ಯದಿಂದ ಉದ್ಭವಿಸಬಹುದಾದ ಎಲ್ಲ ಅಪ್ರಿಯ ಸನ್ನಿವೇಶಗಳನ್ನೂ ಎದುರಿಸಲು ನಾವು ಸಿದ್ಧರಾಗಲೇಕೆಂದು ಸಾರಿದ್ದಾರೆ.

### ಮುಂದೇನು?

ಸೆಪ್ಟೆಂಬರ ೧ಕ್ಕೆ ಜೋಪಾಸನ ಸರಕಾರ ಹೋಗಿ ನಡುಗಾಲ ಸರಕಾರ ಬರಬೇಕೆಂಬ ವಿಚಾರದಿಂದ ವಾಯಿಸರಾಯರು ಪ್ರಮುಖರೊಡನೆ ಮಾತುಕತೆ ಪ್ರಾರಂಭಿಸಿದಾಗಲೆ ಲೀಗಿನ ಈ ನಿರ್ಣಯ ಬಂದು ಬಹಳ ಬಿಕ್ಕಟ್ಟಿನ ಪ್ರಸಂಗವುಂಟಾಗಿದೆಯೆಂಬಲ್ಲಿ ಸಂಶಯವಿಲ್ಲ. ಈಗ ಬ್ರಿಟಿಶ ಮಂತ್ರಿಗಳು ಇದೀ ಯೋಜನೆಯನ್ನೇ ಹಿಂತೆಗೆದುಕೊಳ್ಳುವರೊ ? ಅಥವಾ ಧೈರ್ಯದಿಂದ ಲೀಗನ್ನು ಬಿಟ್ಟು ಮುಂದೆ ಸಾಗಿ ಬಂದ ವಿರೋಧವನ್ನು ಎದುರಿಸಲು ಸಿದ್ಧರಾಗುವರೊ ? ಬ್ರಿಟಿಶ ಕನ್ಸರ್ವೇಟಿವರ ಒತ್ತಾಯದ ಶಕ್ತಿ, ಸ್ವತಃ ಮಂತ್ರಿಮಂಡಲದ ಧೈರ್ಯ ಇವುಗಳನ್ನು ಅವಲಂಬಿಸಿದೆ ಈ ಪ್ರಶ್ನೆಯ ಉತ್ತರ. ವಾಯಿಸರಾಯರು ಜಿನ್ನಾರಿಗೆ ಈಗಾಗಲೆ ಒಂದು ಪತ್ರ ಬರೆದಿರುವರಂತೆ. ಹೊಸತಾಗಿ ಮಾತುಕತೆಗಳ ಅನಂತ ಕಣ್ಣುಮುಚ್ಚಾಲೆ ಪ್ರಾರಂಭವಾಗುವದೇನೋ !





# ಅಂತರ್ ರಾಷ್ಟ್ರೀಯ

### ಶಾಂತಿ ಪರಿಷತ್ತು

ಪ್ಯಾರೀಸಿನಲ್ಲಿ ಯುರೋಪಿಯನ್ ರಾಷ್ಟ್ರಗಳ ಶಾಂತಿ ಪರಿಷತ್ತು, ಮೊದಲೇ ನಿರ್ಣಯವಾದಂತೆ, ಲಕ್ಷೆಂಬರ್ಗ ಅರಮನೆಯಲ್ಲಿ ತಾ. ೨೯ಕ್ಕೆ ಪ್ರಾರಂಭವಾಗಿದೆ. ಫಿನ್ಲಂಡ, ಬಲ್ಗೇರಿಯಾ, ರುಮಾನಿಯಾ, ಇಟಲಿ, ಹಂಗೇರಿ ಈ ಶತ್ರುರಾಷ್ಟ್ರಗಳಿಗೆ ಶಾಂತಿದಾನ ಮಾಡಲು ೨೧ ಯುಕ್ತರಾಷ್ಟ್ರಗಳು ನೆರೆದಿವೆ. ಒಂದೇ ತಲೆಮಾರಿನಲ್ಲಿ ಎರಡು ಬಾರಿ ಜರ್ಮನಿಯ ಬೆನ್ನು ಬಿದ್ದ ಅಕ್ರಮಣಶೀಲ ರಾಷ್ಟ್ರಗಳಿಗೆ ದಂಡ ವಿಧಿಸಲು ಸೇರಿದ ಮಿತ್ರರಾಷ್ಟ್ರಗಳ ಸಭಾಸ್ಥಾನವಾಗುವ ಪುಣ್ಯ ಪ್ಯಾರೀಸಿಗೆ ದೊರೆತಿದೆ. ಕಳೆದ ಸಲ ಅಲ್ಲಿ ಸೇರಿ ಸ್ಥಾಪಿಸಲ್ಪಟ್ಟ ಶಾಂತಿ ಅಲ್ಪಾಯುವಾದಂತೆ ಈಬಾರಿಯೂ ಆಗಬಾರದೆಂಬ ಆಸೆ ಎಲ್ಲ ರಾಷ್ಟ್ರಗಳಲ್ಲಿಯೂ ಇದೆ. ಆದರೆ ಈ ಆಸೆ ಸತ್ಯವಾಗುವಂತೆ ಪ್ರತಿಯೊಂದು ರಾಷ್ಟ್ರವೂ ಇಲ್ಲಿ ನ್ಯಾಯಕ್ಕೋಸ್ಕರ ಎಷ್ಟು ತ್ಯಾಗಮಾಡಲು ಸಿದ್ಧವಾಗುವದೋ ಅಷ್ಟು ಮಟ್ಟಿಗೆ ಅದು ಫಲಕಾರಿಯಾಗುವದೆಂದು ಹೇಳಲಡ್ಡಿಯಿಲ್ಲ. ಇರಲಿ. ಇದರ ಮೇಲೆ ಇತಿಹಾಸವೇ ತೀರ್ಪು ಕೊಡಬಲ್ಲದು.

ಶಾಂತಿ ಪರಿಷತ್ತು ಇನ್ನೂ ಇದೇ ಆರಂಭವಾಗಿದೆ. ಅದರಲ್ಲಿ ಇಮ್ಮಗದ ಹೋರಾಟ ನಡೆಯಲಿದೆ. ವಿಜಯಿ ರಾಷ್ಟ್ರಗಳಲ್ಲೆ ಎರಡು ಬಣ. ಒಂದು ಕಡೆ ೪ ಪ್ರಬಲ ರಾಷ್ಟ್ರಗಳು ಈ ಪರಿಷತ್ತಿನ ಕಾರ್ಯಕಲಾಪಗಳ ವಿಧಿನಿಯಮಗಳನ್ನು ಕೂಡ ಸಿದ್ಧಗೊಳಿಸಿ ಚಿಕ್ಕ ೧೭ ರಾಷ್ಟ್ರಗಳನ್ನು ಹೌದಪ್ಪಗಳ ಮಾಲಿಕೆಯಾಗಿ ಮಾಡಲು ಪ್ರಯತ್ನಪಟ್ಟಿವೆ. ಚತುರ್ರಾಷ್ಟ್ರ ವಿದೇಶ ಮಂತ್ರಿಗಳು ಸಿದ್ಧಗೊಳಿಸಿದ ಈ ಕರಡು ವಿಧಿನಿಯಮಗಳನ್ನು ಪರಿಷತ್ತು ಒಪ್ಪಲೇಬೇಕೆಂಬ ನಿಯಮವಿಲ್ಲದಿದ್ದರೂ ಚಿಕ್ಕವರು ತಮ್ಮ ಕರಡಿಗೆ ಗೋಣು ಹಾಕುವಂತೆ ಮಾಡುವ ಹವಣಿಕೆಯಲ್ಲಿ ಅವರು ತಮ್ಮ ಶಕ್ತಿಸರ್ವಸ್ವವನ್ನು ಪ್ರಯೋಗಿಸದಿರರು. ಪ್ರಬಲರ ಹಿರಿತನವನ್ನು ಶಾಶ್ವತಗೊಳಿಸುವ ಮೊದಲ ಹೆಜ್ಜೆಯದು. ಆದರೆ ಅಸ್ಟ್ರೇಲಿಯಾದ ಡಾ. ಇವಾಟರ ಮುಂದಾಳ್ತನದಲ್ಲಿ ಚಿಕ್ಕರಾಷ್ಟ್ರಗಳು, ತಮ್ಮನ್ನು ಮೂಗು ಹಿಡಿದು ನಡೆಸುವ ಈ ಹಿರಿಯರ ಪ್ರಯತ್ನಕ್ಕೆ ಪ್ರಬಲ ವಿರೋಧವನ್ನು ಮುಂದೊಡ್ಡುವ ಲಕ್ಷಣವಿದೆ.

ಜರ್ಮನಿಯ ಸೆರಗಿಗೆ ತಮ್ಮ ಹಣೆಬರೆಹವನ್ನು ಕಟ್ಟಿ ಈಗ ಶಾಂತಿಭಿಕ್ಷೆ ಬೇಡಲು ನಿಂತಿರುವ ಆ ಐದು ದುರ್ದೈವಿ ರಾಷ್ಟ್ರಗಳಿಗೆ, ಈಗ ಚತುರ್ರಾಷ್ಟ್ರಗಳು ಸಿದ್ಧಗೊಳಿಸಿಟ್ಟಿರುವ ಕರಾರುಗಳ ವಿಷಯಕ್ಕೆ ತಮ್ಮ ಅಕ್ಷೇಪಗಳನ್ನು ಮಂಡಿಸಲು ಅವಕಾಶವೀಯಲಾಗುವದು. ಇದು ಶಾಂತಿಪರಿಷತ್ತಿನ ಎರಡನೆ ಮುಖದ ಹೋರಾಟವಾಗಿರೂಪುಗೊಳ್ಳುವದು. ಇಟಲಿಗಾಗಿ ವಿದೇಶ ಮಂತ್ರಿಗಳು ಸಿದ್ಧಗೊಳಿಸಿರುವ ಕರಾರುಗಳನ್ನು ಗಾಸ್ಪೆರಿ ಮಂತ್ರಿಮಂಡಲ ಉಗ್ರವಾಗಿ ಪ್ರತಿಭಟಿಸುವದರಲ್ಲಿ ಸಂಶಯವಿಲ್ಲ. ಈಗಿರುವ ರೂಪದಲ್ಲಿ ಶಾಂತಿ ಕರಾರಿಗೆ ಸಹಿ ಹಾಕುವ ಬದಲು ಇಟಲಿಯ ಸರಕಾರ ರಾಜೀನಾಮೆ ಕೊಡಲು ಕೂಡ ಸಿದ್ಧವಾಗಬಹುದು. ಟ್ರೀಸ್ಟೆಯ ಅಂತರ್‌ರಾಷ್ಟ್ರೀಕರಣ ಮತ್ತು ಇತರ ಇಟಾಲಿಯನ್ ಪ್ರಾದೇಶಿಕ ಸ್ಥಿತ್ಯಂತರಗಳ ವಿರುದ್ಧ ಇಟಲಿಯ ಜನಮತ ತೀಕ್ಷ್ಣವಾಗಿದೆ. ೨೧ ಜನ ಶಾಂತಿದಾಯಕರು ಇದನ್ನು ಅಲಕ್ಷಿಸುವಂತಿಲ್ಲ. ಇನ್ನು ದಕ್ಷಿಣ ಟಾಯರೋಲದ ಮೇಲೆ ಹಕ್ಕು ಮಂಡಿಸಿರುವ ಅಸ್ಟ್ರಿಯಾವಾದರೂ-ಸದ್ಯದ ಶಾಂತಿ ಒಪ್ಪಂದಗಳಲ್ಲಿ ಅದರ ಸಂಬಂಧವೇನೂ ಇಲ್ಲದಿದ್ದರೂ—ಆ ಭಾಗವನ್ನು ಇಟಲಿಯ ಕೈಯಲ್ಲೆ ಬಿಡಬೇಕೆಂಬ ಪ್ರಬಲ ಚತುಷ್ಟಯದ ನಿರ್ಣಯವನ್ನು ತಲೆಕೆಳಗು ಮಾಡಲು ಉಳಿದ ೧೭ ರಾಷ್ಟ್ರಗಳ ಬೆನ್ನು ಹತ್ತುವಲ್ಲಿ ಸಂದೇಹವಿಲ್ಲ.

### ಅಧ್ಯಕ್ಷರ ಆಯ್ಕೆ

ಶಾಂತಿ ಪರಿಷತ್ತಿನ ಮೊದಲ ತಿಕ್ಕಾಟ ತಾತ್ಪೂರ್ತಿಕ ಅಧ್ಯಕ್ಷರ ಆಯ್ಕೆಯ ಬಗೆಗಾಯಿತು. ಅಸ್ಟ್ರೇಲಿಯಾದ ಡಾ. ಇವಾಟರು ಬೆಲ್ಜಿಯಂನ ಸ್ಪಾಕರನ್ನು ಅಧ್ಯಕ್ಷತೆಗೆ ಸೂಚಿಸಿದರು. ಮೊಲಟೊವರು ಅದನ್ನು ವಿರೋಧಿಸಿ, ಯುಗೊಸ್ಲಾವಿಯಾದ ಕಾರ್ಡೆಲಜರೇ ಆ ಸ್ಥಾನಕ್ಕೆ ಯೋಗ್ಯರೆಂದು ಪ್ರತಿಪಾದಿಸಿದರು. ಮತಕ್ಕೆ ಬಿದ್ದಾಗ ಸ್ಪಾಕರೇ ಗೆದ್ದರು. ಆದರೆ ಅವರು ಕಾರ್ಡೆಲಜರನ್ನು ಉಪಾಧ್ಯಕ್ಷತೆಗೆ ಸೂಚಿಸಿದರು ಮತ್ತು ಅವರ ಸೂಚನೆ ಒಪ್ಪಲ್ಪಟ್ಟಿತು. ಹೀಗೆ ಸೋಲಿನ ಕಹಿತನ ಕಡಿಮೆಯಾಯಿತು.

ಈ ಸೋಲನ್ನು ಸೋವಿಯಟ್ ರಶಿಯಾ ಮೌನದಿಂದ ಅಂಗೀಕರಿಸಿದಂತಾದರೂ ಮುಂದೆ ಸಂಗತಿಗಳು ಇಷ್ಟು ಸರಳವಾಗಿ ಸಾಗಲಾರವು. ವಿದೇಶ ಮಂತ್ರಿಗಳು ಸಿದ್ಧಗೊಳಿಸಿದ ಕರಡು ವಿಧಿನಿಯಮಗಳಿಗೆ ಪರಿಷತ್ತು ಹೂಂಗುಟ್ಟಿದರೆ, ಆಗ ಮಹಾಸಭೆಯಲ್ಲಾದರೂ ಸಮಿತಿಯಲ್ಲಾದರೂ ಮಹತ್ವದ ನಿರ್ಣಯ ಪಾಸಾಗಬೇಕಾದರೆ ಎರಡು ಮೂರಾಂಶ ಸದಸ್ಯರ ಬೆಂಬಲ ಬೇಕಾಗುವದು. ಸೋವಿಯಟ್ಟಿನ ಪಕ್ಷದಲ್ಲಿ ಒಂದು ಮೂರಾಂಶ ಸದಸ್ಯರು ಇದ್ದೇ ಇರುವದರಿಂದ ತನಗೆ ಬೇಡವಾದ ನಿರ್ಣಯಗಳು ಅಂಗೀಕರಿಸಲ್ಪಡದಂತೆ ಅದು ಯಶಸ್ವಿಯಾಗಿ ತಡೆಯೊಡ್ಡಬಲ್ಲದು.

### ಕರಡು ಒಪ್ಪಂದ

ಶಾಂತಿ ಪರಿಷತ್ತಿನ ಅವಗಾಹನೆಗಾಗಿ ಚತುರ್ರಾಷ್ಟ್ರಗಳು ಸಿದ್ಧಗೊಳಿಸಿದ ಶತ್ರುಪಂಚಕದ ಮೇಲೆ ಹೊರಿಸಬೇಕಾದ ಶಾಂತಿ ಕರಾರುಗಳ ಕರಡುಗಳು ಇದೀಗ ಪ್ರಸಿದ್ಧವಾಗಿವೆ. ಈ ಕರಾರುಗಳಲ್ಲದೆ ಇತರ ಕೆಲ ಸಂಗತಿಗಳ ಬಗ್ಗೆ ಚತುರ್ರಾಷ್ಟ್ರಗಳಲ್ಲಿ ಭಿನ್ನಾಭಿಪ್ರಾಯವಿರುವದರಿಂದ ಅವುಗಳ ನಿರ್ಣಯವನ್ನು ಶಾಂತಿಪರಿಷತ್ತೆ ಮಾಡುವದು. ಈ ಕರಾರುಗಳು ಚುಟುಕಿನಲ್ಲಿ ಇಂತಿವೆ:—

### (೧) ಇಟಲಿ

ಇಟಲಿಯ ಗಡಿಗಳು ೧೯೩೮ ಜನೇವರಿ ೧ ರಲ್ಲಿದ್ದಂತಿರಬೇಕು. ಆದರೆ ಇಟಲಿ-ಫ್ರಂಚ ಗಡಿ ಸ್ವಲ್ಪ ಉತ್ತರಕ್ಕೆ ತಳ್ಳಲ್ಪಡುವದು. ಟ್ರೀಸ್ಟ ಅಂತರಾಷ್ಟ್ರೀಯ ಆಡಳಿತೆಗೊಳಪಡುವದು. ಇಟಲಿ ತನ್ನ ಎಲ್ಲ ಅಫ್ರಿಕನ್ ವಸಾಹತುಗಳ ಮೇಲಿನ ಅಧಿಕಾರ ತ್ಯಾಗಮಾಡಬೇಕು. ಚೀನದಲ್ಲಿರುವ ವಿಶೇಷ ಹಕ್ಕುಗಳನ್ನೆಲ್ಲ ಬಿಡಬೇಕು. ಅಲ್ಬೇನಿಯಾ, ಇತಿಯೋಪಿಯಾಗಳ ಸ್ವಾತಂತ್ರ್ಯ ಮನ್ನಿಸಬೇಕು. ಫ್ರೆಂಚ, ಯುಗೊಸ್ಲಾವ ಗಡಿಗಳಲ್ಲಿರುವ ಇಟಾಲಿಯನ್ ವ್ಯೂಹಗಳನ್ನು ನಾಶಗೊಳಿಸಬೇಕು. ಸೈನ್ಯ, ವಿಮಾನ ಮತ್ತು ನೌಕಾಪಡೆಗಳನ್ನು ಇಳಿಸಬೇಕು. ಯುಕ್ತ ರಾಷ್ಟ್ರಗಳಿಗೆ ವ್ಯಾಪಾರ ಮತ್ತು ಇತರ ವಿಷಯಗಳಲ್ಲಿ ಇತರ ರಾಷ್ಟ್ರಗಳಿಗಿಂತ ಅನುಕೂಲವಾದ ಅವಕಾಶವನ್ನು ಶಾಂತಿ ಒಪ್ಪಂದವಾದ ೧೮ ತಿಂಗಳ ವರೆಗೆ ಕೊಡಬೇಕು, ಇತ್ಯಾದಿ.

### (೨) ರುಮಾನಿಯಾ

ಗಡಿ, ಜನೇವರಿ ೧,೧೯೪೧ ರಲ್ಲಿದ್ದಂತೆ. ಆದರೆ ರುಮಾನಿಯಾ ಹಂಗೆರಿ ಗಡಿ ೧೯೩೮ ರ ಆರಂಭದಲ್ಲಿದ್ದಂತೆ. ಪರಮಾವಧಿ ಸೈನ್ಯ ೧೨೦,೦೦೦ ನೌಕಾಪಡೆ ೫೦೦೦ ಮತ್ತು ೧೫೦೦೦ ಟನ್, ವಿಮಾನ ಬಲ ೧೫೦ ಇರಬೇಕು. ಬಾಂಬರ ವಿಮಾನ ಇಟ್ಟುಕೊಳ್ಳಕೂಡದು. ಮಿತ್ರರಿಗೆ ಕೊಡಬೇಕಾದ ನಷ್ಟಪರಿಹಾರ ದ್ರವ್ಯ ೩೦ ಕೋಟಿ ಡಾಲರ. ಮಿತ್ರ ಸೈನ್ಯಗಳು ಒಪ್ಪಂದವಾದ ೯೦ ದಿನಗಳಲ್ಲಿ ರುಮಾನಿಯಾವನ್ನು ಬಿಟ್ಟು ಹೋಗುವವು.

### (೩) ಬಲ್ಗೇರಿಯಾ

ಗಡಿ: ಜನೆವರಿ ೧,೧೯೪೧ ರಲ್ಲಿದ್ದಂತೆ ಪರಮಾವಧಿ ಸೈನ್ಯ ೯೫೦೦೦ ನೌಕಾಪಡೆ ೭೨೫೦ ಟನ್ (೩೫೨೦ ನೌಕೆಗಳು) ೯೦ ವಿಮಾನ. ಯುಗೋಸ್ಲಾವಿಯಾ ಮತ್ತು ಗ್ರೀಸುಗಳಿಗೆ ಪರಿಹಾರವೀಯಬೇಕು (ಎಷ್ಟೆಂದು ನಿರ್ಣಯವಾಗಿಲ್ಲ.

### (೪) ಹಂಗೇರಿ

ಗಡಿ: ೧೯೩೮ ಜನೆವರಿ ೧ ರಲ್ಲಿದ್ದಂತೆ. ಹಿಟ್ಲರನ ೧೯೪೦ ರ ವಿಯೆನ್ನಾ ತೀರ್ಪು ರದ್ದುಗೊಳಿಸಲ್ಪಟ್ಟಿದೆ. ಹಂಗೆರಿಯ ಪರಮಾವಧಿ ಸೈನ್ಯಶಕ್ತಿ ೬೫೦೦೦, ವಿಮಾನಪಡೆ ೯೦ ಇರಬೇಕು. ೩೦ ಕೋಟಿ ಡಾಲರು ಪರಿಹಾರ ಮಿತ್ರರಿಗೆ ಕೊಡಬೇಕು. ಅದರಲ್ಲಿ ೨೦ ಕೋಟಿ ರಶಿಯಾಕ್ಕೆ ಉಳಿದುದು ಯುಗೊಸ್ಲೊವಿಯಾ, ಝೆಕೊಸ್ಲಾವಾಕಿಯಾಗಳಿಗೆ.

### (೫) ಫಿನ್ಲಂಡ

ಗಡಿ: ೧೯೪೧ ರಲ್ಲಿದ್ದಂತೆ. ಆದರೆ ಪೆಟ್ಸಾಮೊಪ್ರಾಂತ ಸೋವಿಯಟ್ಟಿಗೆ ಕೊಡಬೇಕು. ಹ್ಯಾಂಗೊ ಅರ್ಧದ್ವೀಪದಲ್ಲಿ ¦ ಸೋವಿಯಟ್ಟು ಒಪ್ಪಂದ ಮೂಲಕ ಸಂಪಾದಿಸಿದ ಹಕ್ಕುಗಳನ್ನು ತ್ಯಜಿಸುತ್ತದೆ. ಆದರೆ ಪೊರ್ಕಾಲಾಉದ್ದದಲ್ಲಿ ೫೦ ವರ್ಷಗಳ ಅವಧಿಯ ವರೆಗೆ ರಶಿಯಾಕ್ಕೆ ನೌಕಾ ಠಾಣೆ ಸ್ಥಾಪಿಸಲು ೫೦ ಲಕ್ಷ ಮಾರ್ಕ ಬಾಡಿಗೆ ತೆಗೆದುಕೊಂಡು ಫಿನ್ಲಂಡು ಸ್ಥಳ ಕೊಡುವದು. ಫಿನ್ಲಂಡಿನ ಪರಮಾವಧಿ ಸೈನ್ಯ ೩೪೦೦೦ ನೌಕಾಬಲ ೪೫೦೦ (೧೦೦೦೦ ಟನ್) ವಿಮಾನ ಬಲ ೬೦ ಇರಬೇಕು. ಸೋವಿಯಟ್ ಯೂನಿಯನ್ನಿಗೆ ೩೦ ಕೋಟಿ ಡಾಲರ ಪರಿಹಾರ ಕೊಡಬೇಕು.

### ಪುನಃ ಪರಮಾಣು ಪ್ರಯೋಗ

ಅಮೇರಿಕನ್ ಸರಕಾರದವರು ಬಿಕಿನಿ ದ್ವೀಪದ ಸಮೀಪ ಜುಲೈ ೨೫ ಕ್ಕೆ ಪರಮಾಣು ಬಾಂಬಿನ ಎರಡನೆ ಪ್ರಯೋಗವನ್ನು ನಡೆಸಿದರು. ಗುರಿ ಪ್ರದೇಶದಲ್ಲಿ ೮೫ ಹಡಗಗಳನ್ನು ನಿಲ್ಲಿಸಲಾಗಿತ್ತು. ಅದರೆ ಈ ಬಾರಿ ಬಾಂಬನ್ನು ಅಕಾಶದಿಂದ ಒಗೆಯಲಿಲ್ಲ ನೀರಿನೊಳಗ ಪರಮಾಣು ಸ್ಫೋಟವಾದರೆ ಏನಾಗುವದೋ ಕಂಡುಹಿಡಿಯಬೇಕೆಂದು ಸಮುದ್ರ ತಲದಲ್ಲಿ ಬಾಂಬನ್ನಿಟ್ಟು, ವಿದ್ಯುತ್ ತಂತಿಯನ್ನು ಹಚ್ಚಿ ೧೫ ಮೈಲು ದೂರದಿಂದ ಚಾಲನೆಗೊಳಿಸಲಾಯಿತು. ಪ್ರಚಂಡ ಸ್ಫೋಟ ಪರಿಣಮಿಸಿ ೨೧೦೦ ಅಡಿ ಅಗಲ ೫೮೦೦ ಅಡಿ ಎತ್ತರದ ಉದ್ದಾಮ ತರಂಗಪರ್ವತವೊಂದು ಎದ್ದಿತು. ಪ್ರಯೋಗಕ್ಕೊಳಗಾದ ಇಡಿ ನೌಕಾಪಡೆಯನ್ನೇ ಈ ತೆರೆ ಸ್ವಾಹಾ ಮಾಡಿಬಿಡುವದೋ ಎನಿಸಿತು. ೫೦೦೦ ಅಡಿ ನೀರು ೮೦೦೦ ಅಡಿ ಉಗಿ ಮೋಡದೊಡನೆ ಸೇರಿ ಅತ್ಯಂತ ಪ್ರಲಯಾಂತಕ ದೃಶ್ಯವಾಗಿ ತೋರಿತು. ಆದರೆ ಹಡಗುಗಳಲ್ಲಿ ಅಧಿಕಾಂಶ ಸುರಕ್ಷಿತವಾಗಿ ಉಳಿದವು. ಹತ್ತು ಹಡಗಗಳು ಮಾತ್ರ ಮುಳುಗಿದವು. ೨೬೦೦೦ ಟನ್ನಿನ ಯುದ್ಧ ಹಡಗ, ೩೩೦೦೦ ಟನ್ ವಿಮಾನವಾಹಕ ಮತ್ತು ಇತರ ಹಡಗ, ಜಲಾಂತರ್ಗಾಮಿಗಳು ಕಾಣೆಯಾಗಿವೆ.

೫ ನೆ ಪರಮಾಣು ಬಾಂಬಿನ ಈ ಸ್ಫೋಟ ಜುಲೈ ೧ ರಲ್ಲಿ ನಡೆದ ೪ ನೆ ಸ್ಫೋಟಕ್ಕಿಂತ ಉದ್ದಾಮವಾಗಿತ್ತೆಂದು ಸುದ್ದಿಗಾರರ ಮತ.

### ಪಾಲಿಸ್ತಾನದ ವಿಚ್ಛೇದ?

ಜರುಸಲೇಂನಲ್ಲಿ ಬ್ರಿಟಿಶ ಸನ್ನಿಧಿ ಕೇಂದ್ರದ ವಿನಾಶ ಮತ್ತು ಅದರಿಂದೊದಗಿದ ೮೦ ಕ್ಕೂ ಮಿಕ್ಕಿದ ಪ್ರಾಣಹಾನಿ ಬ್ರಿಟಿಶರಿಗೆ ಯಹೂದ್ಯ ದುರಾಚಾರಿಗಳ ಮೇಲೆ ಕ್ರಮ ತೆಗೆದುಕೊಳ್ಳಲು ಒಳ್ಳೆಯ ಆಧಾರವೊದಗಿಸಿಕೊಟ್ಟಿತು. ಬ್ರಿಟಿಶರು ಯಹೂದ್ಯ ಗೋಪ್ಯ ಸಂಘಗಳನ್ನು ಹಣಿಯಲು ಅತ್ಯಂತ ಕಠೋರ ಕ್ರಮಗಳನ್ನು ಕೈಕೊಂಡಿದ್ದಾರೆ. ಯಹೂದ್ಯ ವಿಭಾಗ ಸಂಸ್ಥೆಯ ಕಚೇರಿಯ ಜಪ್ತಿ, ಮುಖಂಡರ ಬಿಡುಗಡೆ, ಯಹೂದ್ಯರ ಬಂಧವಾಗಿದೆಯಲ್ಲದೆ ಯಹೂದ್ಯರ ಪ್ರಮುಖ ನಗರವಾದ ತೆಲಅವೀವ (ಜನ ಸಂಖ್ಯೆ ೧,೯೫,೦೦೦) ಕ್ಕೆ ಮುತ್ತಿಗೆಹಾಕಿ ಶಾಂತಿರಕ್ಷಕ ದಳ ಮನೆ ಮನೆ ಝಡತಿ ಮಾಡಲು ಆರಂಭಿಸಿರುವರು. ಇದಿ ದಿಶ ಕರ್ಫ್ಯೂ ಆಜ್ಞೆ ಜಾರಿ ಮಾಡಿ ಯಾರೂ ಮನೆ ಬಿಟ್ಟು ಹೊರಬಾರದಂತೆ ನಿಷೇಧಿಸಿಕೊಳ್ಳಲಾಗಿದೆ. ಯಹೂದ್ಯ ಪೋಲೀಸರು ಕೂಡ ಮನೆಯಲ್ಲಿಯೆ ಉಳಿಯಬೇಕಾಗಿದೆ.

ಯಹೂದ್ಯ ದುಷ್ಕರ್ಮಿಗಳ ವಿರುದ್ಧ ಹೀಗೆ ಉಗ್ರ ಕ್ರಮಗಳನ್ನು ಕೈಕೊಳ್ಳುವದಾಗಿದ್ದರೂ ಪಾಲಿಸ್ತಾನ ಸಮಸ್ಯೆಯನ್ನು ಯಹೂದ್ಯರಿಗನುಕೂಲವಾಗುವಂತೆ ಬಿಡಿಸುವ ಪ್ರಯತ್ನಗಳು ನಡೆದಿವೆ. ಹೆರವರ ನಾಡುಗಳನ್ನು ವಿಭಜಿಸುವ ಯೋಜನೆಗಳನ್ನು ರಚಿಸುವದರಲ್ಲಿ ಎತ್ತಿದ ಕೈಯಾದ ಪ್ರೊ. ಕೂಪ್ಲಂಡರು ರಚಿಸಿದ ಯೋಜನೆಯನ್ನನುಸರಿಸಿ ಪಾಲಿಸ್ತಾನವನ್ನು ಯಹೂದ್ಯ-ಅರಬರಲ್ಲಿ ಹಂಚುವ ಎತ್ತುಗಡೆ ನಡೆದಿದೆ. ಈ ಸಂಬಂಧದಲ್ಲಿ ಸೆಪ್ಟೆಂಬರಕ್ಕೆ ಅರಬ ರಾಷ್ಟ್ರಗಳ ಮುಂದುಮೇಜಿನ ಪರಿಷತ್ತು ಕರೆಯಲಾಗಿದೆ. ಆದರೆ ವಿಭಜನೆಗೆ ಅರಬ-ಯಹೂದ್ಯರಿಬ್ಬರೂ ವಿರೋಧಿಗಳಾಗಿದ್ದಾರೆ. ಈ ನಡುವೆ ಅಮೇರಿಕನ್ ಅಪೇಕ್ಷೆಯಂತೆ ೧ ಲಕ್ಷ ಯಹೂದ್ಯರಿಗೆ ಪಾಲಿಸ್ತಾನದಲ್ಲಿ ಪ್ರವೇಶವೀಯಲು ಬ್ರಿಟಿಶರು ಸಮ್ಮತಿಸಿದ್ದಾರೆ. ಈ ಕಹಿಗುಳಿಗೆಯನ್ನು ಅರಬರ ಪಾಲಿಗೆ ಸಿಹಿಯಾಗಿ ಮಾಡಲು ಅಮೇರಿಕನ್ನರು ದಾನೋಪಾಯವನ್ನು ಅವಲಂಬಿಸುವವರಿದ್ದಾರೆ. "ಅರಬರ ಆರ್ಥಿಕ ವಿಕಾಸವನ್ನು ಯಹೂದ್ಯರ ಮಟ್ಟಕ್ಕೇರಿಸುವ ಸಲುವಾಗಿ" ಅಮೇರಿಕನ್ನರು ಅರಬ ರಾಷ್ಟ್ರಗಳಿಗೆ ೩೦ ಕೋಟಿ ಡಾಲರುಗಳನ್ನು ಕೊಡಬೇಕೆಂಬ ಸೂಚನೆ ಬಂದಿದೆ. ಇದರಲ್ಲಿ ೭॥ ಕೋಟಿ ಡಾಲರುಗಳು ಪಾಲಿಸ್ತಾನ ಅರಬರಿಗೆ ದೊರೆಯುವವು. ಅರಬ ಮುಂದಾಳುಗಳನ್ನು ಬ್ರಿಟಿಶರು ಮೊದಲನೆಯ ಮಹಾಯುದ್ಧದ ಕಾಲಕ್ಕೆ ಹೊಳೆಯುವ ಚಿನ್ನದ ಸಹಾಯದಿಂದಲೇ ಬುಟ್ಟಿಗೆ ಹಾಕಿಕೊಂಡಿದ್ದರು. ಈಗ ಇನ್ನೊಮ್ಮೆ ಅದೇ ನಾಟಕ ಆಡಲಾಗುವದೆ ?

---

ಕೊಲ್ಹಾಪುರದ ವಿದ್ಯಾವಿಲಾಸ ಎಂಬ ಮರಾಠಿ ದೈನಿಕದ ಸಂಪಾದಕರೂ ಮುದ್ರಕರೂ ಪ್ರಕಾಶಕರೂ ಆದ ಗೋಖಲೆಯವರಿಗೆ ಮುದ್ರಣ ಕಾಯದೆಯನ್ವಯ ೪೦೦೦ ಇಡುಗಂಟು ಇಡಲು ಅಪ್ಪಣೆ ವಿಧಿಸಲಾಗಿದೆ. ಈ ಮೊದಲು ಇಟ್ಟ ೧೦೦೦ ರೂ. ಇಡಗಂಟು ಅಕ್ಷೇಪಾರ್ಹ ವಿಷಯ ಪ್ರಸಿದ್ಧಿಸಿದ್ದಕ್ಕೆ ಜಪ್ತು ಮಾಡಲಾಗಿದೆ.

* *

೧೯೪೨ ರ ಚಳವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಎರಡು ವರ್ಷ ಶಿಕ್ಷೆಗೆ ಗುರಿಯಾಗಿ ಮೊನ್ನೆ ಬಿಡುಗಡೆಯಾಗಿ ಬಂದ ದಾವಣಗೆರೆಯ ವಿದ್ಯಾರ್ಥಿ ಮುಖಂಡರಾದ ಶ್ರೀ ಇಟಿಗಿ ವೇದಮೂರ್ತಿಯವರು ಸ್ವಗ್ರಾಮಕ್ಕೆ ಬಂದಾಗ ಅವರಿಗೆ ಹಾರ್ದಿಕ ಸ್ವಾಗತವೀಯಲಾಯಿತು.

# ಕರ್ನಾಟಕ ಪ್ರಾಂತರಚನೆ
## ಮೈಸೂರಿನಲ್ಲಿ ಶ್ರೀ ದಿವಾಕರರ ಭಾಷಣ

ಕರ್ನಾಟಕದಲ್ಲಿ ಈಗ ಮೈಸೂರು, ಮುಂಗಳೂರ, ಹೈದರಾಬಾದು, ಧಾರವಾಡ, ಸಾಂಗಲಿ, ಇತ್ಯಾದಿ ೧೮ ಆಡಳಿತಗಳಿವೆ. ಕರ್ನಾಟಕದಲ್ಲಿ ಸುಮಾರು ೨೦ ಜಿಲ್ಹೆಗಳಿವೆ. ೨ಕೋಟಿ ಜನಸಂಖ್ಯೆಯಾಗಬಹುದು.

ಒಂದಾನೊಂದು ಕಾಲಕ್ಕೆ ನಮ್ಮ ದುರ್ದೈವದಿಂದ ಭರತಖಂಡವು ನೂರಾರು ಚೂರು ಚೂರುಗಳಾಗಿ ಒಡೆಯಲ್ಪಟ್ಟಿರಬಹುದು. ಆಗ ಪ್ರಜೆಗಳು, ಅವರ ವಾಣಿ ಎಂಬುದೇ ಇದ್ದಿಲ್ಲದಿರಬಹುದು. ಆದರೆ ಈಗ ಇನ್ನುಮುಂದೆ ಭರತಖಂಡ ಮಾತ್ರವೇಕೆ? ಇಡೀ ಪ್ರಪಂಚದಲ್ಲೇ ಪ್ರಜಾವಾಣಿಯ ಮೇಲೆ ಪ್ರಭುತ್ವ ನಡೆಯತಕ್ಕದ್ದಿದೆ.

ಬ್ರಿಟಿಷರು ಭರತಖಂಡದಿಂದ ಗಂಟುಮೂಟೆ ಕಟ್ಟಿ ಹೊರಡಲನುವಾಗುತ್ತಿದ್ದಾರೆ. ಘಟನಾ ಸಮಿತಿಯ ರಚನೆಯಾಗುತ್ತಿದೆ. ರಾಜ್ಯಾಂಗ ರಚನಾ ಕಾರ್ಯಕ್ರಮ ಶೀಘ್ರದಲ್ಲಿಯೇ ಆರಂಭವಾಗಲಿದೆ. ಇಂಥ ಕಾಲದಲ್ಲಿ ನಮ್ಮ ಕರ್ನಾಟಕದ ಮೇಲ್ಕಂಡ ಅನೇಕ ಭಾಗಗಳೆಲ್ಲ ಮತ್ತೆ ಒಂದಾಗಿ ತನ್ನ ಜೀವ, ಜೀವನ, ಕಲೆ ಸಂಸ್ಕೃತಿ ಭಾಷೆ ವಿದ್ಯೆ ವೈವಿಧ್ಯಗಳನ್ನೆಲ್ಲ ರಕ್ಷಿಸಿ ಕೊಳ್ಳಬೇಕೇ? ಅಥವಾ ಹೀಗೇ ಕಾಲ ಹಾಕಿದರಾಯಿತು. ಯಾವಾಗಲೋ ತಾನಾಗಿ ಆಗುತ್ತದೆ ಯಾರೋ ಮಾಡಿಕೊಡುತ್ತಾರೆಂದು ಕುಳಿತಿರಬೇಕೇ? ಎಂಬುದನ್ನು ಕರ್ನಾಟಕದ ಪ್ರತಿಯೊಬ್ಬನೂ ಕೂಡಲೇ ಕಣ್ಣು ಬಿಟ್ಟು ನೋಡಿ, ವಿಚಾರ ಮಾಡಿ ತೀರ್ಮಾನಿಸಬೇಕು ಎಂಬುದಾಗಿ ಪ್ರಸಿದ್ಧ ಸಾಹಿತಿಗಳೂ ಪ್ರಮುಖರೂ ಆದ ಶ್ರೀ ರಂಗರಾವ ದಿವಾಕರರವರು ಮೈಸೂರು ಕರ್ನಾಟಕ ಸಂಘದಲ್ಲಿಯೂ ಪತ್ರಿಕೋದ್ಯೋಗಿಗಳ ಸಂಘದಲ್ಲಿಯೂ ಭಾಷಣ ಮಾಡುತ್ತ ಹೇಳಿದರು.

ಮುಂದುವರಿಯುತ್ತ ಅವರು "ಇದಕ್ಕಾಗಿ ದೇಶೀಯ ರಾಜರು ತಮ್ಮ ಸ್ಥಾನಮಾನ ಭದ್ರತೆ ಮುಂತಾದವುಗಳಿಗಾಗಿ ಬ್ರಿಟಿಷರು ಮತ್ತು ಭಾರತ ಸರಕಾರದವರೊಡನೆ ವ್ಯವಹಾರ ಮಾಡುತ್ತಿದ್ದಾರೆ. ಅವರದೇ ಒಂದು ಸಂಘಟನೆಯಿಂದ ಕಾರ್ಯಕ್ರಮ ನಡೆಸುತ್ತಿದ್ದಾರೆ. ಅದಕ್ಕನುಸಾರವಾಗಿ ಪ್ರಜೆಗಳೂ ತಮ್ಮ ಭವಿತವ್ಯ ಯಾವ ರೀತಿ ಆಗಬೇಕೆಂಬುದನ್ನು ನಿಶ್ಚಯಿಸಿ ಆ ಬಗ್ಗೆ ತಕ್ಕ ಕಾರ್ಯಮುಖರಾಗಬೇಕು. ರಾಜ ಮಹಾರಾಜರ ಸ್ಥಾನಮಾನಗಳಲ್ಲಿ ಏನೇ ಬದಲಾವಣೆ ಆಗಲಿ, ಆಗದಿರಲಿ, ಎಲ್ಲಿಯೂ ಯಾವಾಗಲೂ ಪ್ರಜೆಗಳ ಸ್ಥಾನಮಾನ ಒಂದೇ. ಇದರಲ್ಲಿ ಬ್ರಿ. ಕರ್ನಾಟಕ ಪ್ರಜೆಗಳು, ದೇಶೀಯ ಸಂಸ್ಥಾನ ಪ್ರಜೆಗಳು ಎಂಬ ಭೇದ ಬರುವುದಿಲ್ಲ; ನಿಲ್ಲುವುದಿಲ್ಲ. ಎಂದರು ಮತ್ತು ಈ ಬಗ್ಗೆ ಕರ್ನಾಟಕದ ಎಲ್ಲ ಪ್ರಜಾಪ್ರಮುಖರೂ ಆಗಮಿಸಿ ವಿಚಾರ ಮಾಡಿ ತೀರ್ಮಾನಿಸಬೇಕು ಎಂದು ತಿಳಿಸಿದರು.

ನಂತರ ಪತ್ರಿಕಾ ಪ್ರತಿನಿಧಿಗಳ ಪ್ರಶ್ನೆಗಳು ನಡೆದವು. ಶ್ರೀ ಕೆ. ಅನಂತ ಸುಬ್ಬರಾಯರಿಗೆ ಉತ್ತರ ಕೊಡುತ್ತ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ ಎಂಬೀ ಭಾಷಾ ಭೇದಗಳನ್ನು ತೊಡೆಯುವ ಬಗ್ಗೆ ಕರ್ನಾಟಕದ ಎಲ್ಲ ಶಾಲೆ ಕಾಲೇಜುಗಳಲ್ಲೂ ಒಂದೇ ವಿಧವಾದ ಪಠ್ಯಪುಸ್ತಕಗಳನ್ನಿಟ್ಟು ಭಾಷೆಯನ್ನು ಬೆಳಿಸಬೇಕು ಎಂಬುದಾಗಿ ಹಿಂದೊಮ್ಮೆ ವಿಚಾರ ಬಂದಾಗ ಪ್ರಸಿದ್ಧ ಪಂಡಿತರು ವಿರೋಧಿಸಿದರು. ಈಗೆ ೧೦ ವರ್ಷದ ಹಿಂದೆ ಇದ್ದಷ್ಟು ಭಾಷಾಭೇದ, ತಿರಸ್ಕಾರ ಈಗ ಇಲ್ಲ. ಮುಂದೆ ಪ್ರಾಂತ ರಚನೆಯಾದಾಗ ಇದೆಲ್ಲ ತಾನಾಗಿ ಸರಿ ಹೋಗುತ್ತದೆ. ಎಂದು ಅವರು ಹೇಳಿದರು.

ಶ್ರೀ ಮನ್ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಬೇಕು ಎಂಬ ಚಳವಳಿಗೂ ಈ ಕರ್ನಾಟಕ ಪ್ರಾಂತ ರಚನಾ ಚಳವಳಿಗೂ ವಿರೋಧಾಭಾಸ ಬರುವದಿಲ್ಲವೇ ಎಂದು ಶ್ರೀ ಟಿ ನಾರಾಯಣರು ಕೇಳಿದ ಪ್ರಶ್ನೆಗೆ "ಇದರಲ್ಲಿ ಒಂದಕ್ಕಿಂತ ಇನ್ನೊಂದು ಬೇರೆಯಲ್ಲ. ಎರಡೂ ಸಾಧನೆಯಾಗಲೇ ಬೇಕು. ಯಾವುದನ್ನು ಹಿಂಬದಿಗಿಡುವ ವಿಚಾರವಿಲ್ಲ ಎಂದರು.

ಇದಕ್ಕೆ ರಚನಾತ್ಮಕ ಕಾರ್ಯಕ್ರಮವೇನು ಎಂದು ಶ್ರೀ ರಂಗಯ್ಯನವರು ಕೇಳಿದ ಪ್ರಶ್ನೆಗೆ ಶ್ರೀ ದಿವಾಕರರು ಸೇವಾದಲ, ಖಾದಿ ಪ್ರಚಾರ, ಭಾಷಾ ಸೇವೆ, ಶಿಕ್ಷಣ ಶಿಬಿರ ಇತ್ಯಾದಿ ಸಾರ್ವಜನಿಕ ಕಾರ್ಯಗಳಲ್ಲಿ ಯಾವ ದೇಶ ಭೇದ ಮಾಡದೆ ಇಡೀ ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆಲಸ ಮಾಡಬೇಕು" ಎಂದರು.

# ಗೋಮಾಂತಕದಲ್ಲಿ ಸ್ವಾತಂತ್ರ್ಯದ ಬಿರುಗಾಳಿ

[ ಮೊದಲನೆಯ ಪುಟದಿಂದ ]

### ಆಡಳಿತೆ

ಪೋರ್ತುಗೀಸರು ಒಬ್ಬ ಗವರ್ನರ ಜನರಲ್ಲನ ಮೂಲಕ ತಮ್ಮ ಈ ಬೊಂಬೆ ಸಾಮ್ರಾಜ್ಯವನ್ನು ಆಳುತ್ತಾರೆ. ಈ ಬೊಂಬೆ ಗವರ್ನರನಿಗೆ ವರ್ಷಕ್ಕೆ ೪೯೫೬೧ ರೂಪಾಯಿ ಸಂಬಳ ಕೊಡಲಾಗುತದೆ. ಸರಕಾರದ ಒಟ್ಟು ಉತ್ಪನ್ನ ೭೫ ಲಕ್ಷ ಗವರ್ನರ ಜನರಲ್ಲನ ಮುಖ್ಯ ಕಚೇರಿ ಮುರಗಾವಕ್ಕೆ ೫ ಮೈಲು ಉತ್ತರದಲ್ಲಿರುವ ಪಣಜಿಯಲ್ಲಿದೆ.

ಗವರ್ನರ ಜನರಲ್ಲನಿಗೆ ೧೫ ಜನರ ಸಲಹೆಗಾರ ಮಂಡಲವೊಂದು ಆಡಳಿತೆಯಲ್ಲಿ ಸಹಾಯ ಮಾಡುತ್ತದೆ. ಅದರಲ್ಲಿ ಅವನೂ ಸೇರಿ ೫ ಜನ ಅಧಿಕಾರಿಗಳು, ೫ ಜನ ನಾಮಕರಣ ಸದಸ್ಯರು, ೫ ಜನ ಆಯ್ಕೆಗೊಂಡ ಪ್ರತಿನಿಧಿಗಳು ಇರುವರು. ೧೧ ಚಿಕ್ಕ ಚಿಕ್ಕ ತಾಲೂಕುಗಳಲ್ಲಿ ವಿಭಾಜಿತವಾದ ಗೋಮಾಂತಕದ ತಾಲೂಕುಗಳನ್ನು ಆಡಳಿತೆಗಾರರು (ಮಾಮಲೇದಾರರಿಗೆ ಸಮಾನ) ಆಳುತ್ತಾರೆ. ಶಾಂತತಾ ರಕ್ಷಣೆಗೆ ಪ್ರತಿ ತಾಲೂಕಿಗೆ ಕಮಾಂಡಂಟರಿದ್ದಾರೆ. ಅವರು ಮಿಲಿಟರಿ ಮತ್ತು ಫೌಜದಾರಿ ಅಧಿಕಾರಿಗಳ ಸಂಯುಕ್ತ ಮೂರ್ತಿಗಳು. ಈ ತಾಲೂಕುಗಳಿಗೆ ಮುನಸಿಪಾಲಟಿಗಳು ಬೇರೆ ಇವೆ. ಆದರೆ ಇವು ನಗರಗಳಿಗಾಗಿರದೆ ಇಡೀ ತಾಲೂಕಿಗಾಗಿವೆ.

### ಜನತೆಗೆ ಅಧಿಕಾರವಿಲ್ಲ

ಪೋರ್ತುಗೀಸರ ಆಡಳಿತೆ ಯಾವಾಗಲೂ ತನ್ನ ದಬ್ಬಾಳಿಕೆ, ಹಿಂಸಾಚಾರಗಳಿಗೆ ಪ್ರಸಿದ್ಧವಾಗಿದೆ. ತಮ್ಮ ಅಧಿಕಾರದ ಪ್ರಾರಂಭಕಾಲದಲ್ಲಿ ಅವರು ರಾಜ್ಯವಿಸ್ತರಣೆಯ ಜತೆಗೆ ಧರ್ಮವಿಸ್ತರಣೆಯನ್ನೂ ಅತ್ಯಂತ ಕ್ರೂರ ರೀತಿಯಿಂದ ನಡೆಸಿದ್ದರು. ಸಾವಿರಗಟ್ಲೆ ಜನರು ತಮ್ಮ ಧರ್ಮವನ್ನು ಉಳಿಸಿಕೊಳ್ಳಲು ಆ ಪ್ರಾಂತದಿಂದ ಓಡಿಹೋಗಿ ಸುತ್ತಣ ಜಿಲ್ಹೆಗಳಲ್ಲಿ ನೆಲೆಸಬೇಕಾಯಿತು. ಈಗ ಧಾರ್ಮಿಕ ಬಲಾತ್ಕಾರದ ಕಾಲ ಕಳೆದಿದ್ದರೂ ಹಿಂದುಗಳೇ ಅಧಿಕ ಸಂಖ್ಯಾಕರಾಗಿದ್ದರೂ ಗೋಮಾಂತಕ ಸರಕಾರದ ಧರ್ಮ ಇಂದಿಗೂ ಕೆಥೋಲಿಕ ಆಗಿಯೆ ಉಳಿದಿದೆ. ಎಲ್ಲ ಧರ್ಮಗಳವರಿಗೂ ಪೋರ್ತುಗಾಲ ಛಾಪಿನ ಕ್ರಿಶ್ಚನ ಕಾಯಿದೆಗಳೇ ಅನ್ವಯಿಸುತ್ತವೆ. ಇದರಿಂದ ಅಮಿಶ್ರಿತ ಅನ್ಯಾಯ್ಯವಾಗಿಲ್ಲವೆನ್ನೋಣ. ಏಕೆಂದರೆ ಇದರಿಂದ ಸ್ತ್ರೀಯಂಗೂ ಆಸ್ತಿಯಲ್ಲಿ ಸಮಾನಾಧಿಕಾರ ದೊರಕುವಂತಾಗಿ ಅವರು ಸ್ವತಂತ್ರ ಪ್ರವೃತ್ತಿಯವರಾಗಿರುವರು!

ಆ ಮಾತು ಒತ್ತಟ್ಟಿಗಿರಲಿ. ಈ ಬೆಳಕು ಕಂಡ ಯುಗದಲ್ಲಿಯಾದರೂ ಪ್ರಜೆಗಳೊಡನೆ ಸರಕಾರದ ಸಂಬಂಧವೇಂತಿದೆ? ಇಷ್ಟವೇ ಇಲ್ಲವೆಂದರೂ ಸಲ್ಲುವದು. ಅದರಿಂದಲೇ ಸರಕಾರದ ಕೃತಿಗಳ ಬಗ್ಗೆ ಎಷ್ಟೋ ವೇಳೆ ಸುಳ್ಳು ಸುದ್ದಿಗಳು ಹಬ್ಬಿರುತ್ತವೆ. ಆಡಳಿತದ ಭಾಷೆ ಪೋರ್ತುಗೀಸ. ಅದು ಜನರಿಗೇನು ತಿಳಿಯಬೇಕು? ಆಡಳಿತೆಯಲ್ಲಿ ಜನರ ಪ್ರಾತಿನಿಧ್ಯ ಶೂನ್ಯ. ೧೧ ಮುನಸಿಪಾಲಟಿಗಳೆನಿಸಿಕೊಳ್ಳುವ ಸಂಸ್ಥೆಗಳಿಗೆ ಸಹ ಆಯ್ಕೆಯಿಲ್ಲ. ಗವರ್ನರನೇ ಅವುಗಳನ್ನು ಆರಿಸುತ್ತಾನೆ. ಗವರ್ನರನ ಸಲಹೆಗಾರ ಮಂಡಲದಲ್ಲಿರುವ ೫ ಜನರ ಆಯ್ಕೆಯ ಕ್ರಮ ಅತಿ ವಿಚಿತ್ರ. (ಅವರಲ್ಲಿ ನಾಲ್ವರು ಮಾತ್ರ ಗೋಮಾಂತಕರಿದ್ದು ೫ ನೆಯವನು ದೀವ ದಮಣಗಳ ಪ್ರತಿನಿಧಿ). ನಾಲ್ಕು ಪ್ರಾದೇಶಿಕ ಮತದಾರ ಸಂಘಗಳಿಂದ ಅವರ ಆಯ್ಕೆ. ಅಲ್ಲಿ ಸರಕಾರಕ್ಕೆ ಎಲ್ಲರಿಗಿಂತ ಹೆಚ್ಚು ಕಂದಾಯ ಕೊಡುವ ೯೦ ಜನರಿಗೆ ಮಾತ್ರ ಮತಾಧಿಕಾರ. ಈ ಸಲಹೆಗಾರಮಂಡಲಕ್ಕಾದರೂ ಅಧಿಕಾರ ಲೇಶವೂ ಇಲ್ಲ. ಲಿಸ್ಬನ್ (ಪೋರ್ತುಗಾಲ) ಅಸೆಂಬ್ಲಿಗೆ ಗೋಮಾಂತಕದಿಂದ ಇಬ್ಬರನ್ನು ಆರಿಸಿಕಳಿಸುವರು. ಅದಕ್ಕೆ ಪೋರ್ತುಗೀಜ ಭಾಷೆ ಬಲ್ಲವರೇ ಮತದಾರರು. ಹುರಿಯಾಳುಗಳು ಜೋಡುಜೋಡಾಗಿ ನಿಲ್ಲಬೇಕು. ಇಷ್ಟೆಲ್ಲ ಇದ್ದು ಮತ್ತೆ ಅಧಿಕಾರಿಗಳು ದರ್ಪ ತೋರಿಸಿ ಕೌಲೆತ್ತುಗಳನ್ನೇ ಆರಿಸಿ ಬರುವಂತೆ ಮಾಡುತ್ತಾರೆ. ಕಳೆದ ವರ್ಷ ಚುನಾವಣೆಗಳಲ್ಲಿ ಚುನಾವಣೆ ಅಧಿಕಾರಿಗಳೇ ಅನೇಕ ಮತಗಳನ್ನು ಹಾಕಿಬಿಟ್ಟಿದ್ದರಂತೆ!

### ನಾಗರಿಕ ಹಕ್ಕುಗಳಿಲ್ಲ

ಇನ್ನು ನಾಗರಿಕ ಹಕ್ಕುಗಳ ಕಥೆ. ಪೋರ್ತುಗಾಲದಲ್ಲಿ ಪ್ರಾಗತಿಕರು ಅಧಿಕಾರದಲ್ಲಿರುವಷ್ಟು ಕಾಲ ಗೋಮಾಂತಕದ ಆಡಳಿತೆ ಅಸಮರ್ಥವಾಗಿದ್ದರೂ ಜನರ ನಾಗರಿಕ ಹಕ್ಕುಗಳ ಮೇಲೆ ಗದೆಯೆತ್ತಿದ್ದು ಕಡಿಮೆ. ಆದರೆ ಪೋರ್ತುಗಾಲದಲ್ಲಿ ಡಾ. ಸಾಲಾಝಾರನ ಸರ್ವಾಧಿಕಾರ ೧೯೩೩ ರಲ್ಲಿ ಸ್ಥಾಪಿತವಾದ ಮೇಲೆ ಅದೂ ಉಳಿಯಲಿಲ್ಲ. ಇಂದು ಗೋವೆಯಲ್ಲಿ ಭಾಷಣ, ಲೇಖನ, ಪ್ರಕಟನ, ಪತ್ರಿಕಾ, ಸಂಘ ಸ್ವಾತಂತ್ರ್ಯಗಳು ಹೆಸರಿಗೂ ಇಲ್ಲ. ಭಾಷಣ ಮಾಡುವವನು ಮೊದಲೇ ಟಿಪ್ಪಣಿಗಳನ್ನು ಇಟ್ಟು ಅರ್ಜಿ ಹಾಕಬೇಕು. ಅದು ರಾಜಧಾನಿಗೆ ಹೋಗಿ ಎಂದು ಮರುಳುವದೋ ಅಥವಾ ಮರಳುವದೇ ಇಲ್ಲವೋ ಹೇಳಲಾಸಲ್ಲ. ರಾಜಕೀಯ ಸಂಘಗಳನ್ನು ಸ್ಥಾಪಿಸಲೇ ಕೂಡದು. ಉಳಿದ ಸಂಘಗಳಿಗೂ ಸಾವಿರ ನಿರ್ಬಂಧ ಹೇರುವ ಕಾಯಿದೆ. ಸಿನೇಮಾ ಹಸ್ತಪತ್ರಿಕೆಗೂ ಮುದ್ರಣ ಪ್ರತಿಬಂಧವೆಂದ ಮೇಲೆ ರಾಜಕೀಯ ಪ್ರಕಟನದ ಮಾತೇ ದೂರವಾಯಿತು. ಪತ್ರಿಕೆಗಳನ್ನು ಹೊರಡಿಸಬೇಕಾದರೆ ಮೊದಲು ಅಧಿಕಾರಿಗಳಲ್ಲಿಗೆ ಅಸಂಖ್ಯ ಸಲ ಎಡತಾಕಬೇಕು. ಆ ಮೇಲೆ ಸುದ್ದಿ ನಿಯಂತ್ರಕನ ಕತ್ತರಿಗೆ ಗುರಿಯಾಗಬೇಕು. ಆದರಿಂದ ಸರಕಾರದ ವಿರೋಧ ಒಂದು ಚಕಾರ ಶಬ್ದವೂ ಪಾರಾಗಿ ಬರುವಂತಿಲ್ಲ. ಸುದ್ದಿ ನಿಯಂತ್ರಕರಲ್ಲಿ ಒಬ್ಬ ಗೋಮಾಂತಕನು, ಅದೂ ದೇಶಭಾಷೆಗಳ ಸುದ್ದಿ ಕತ್ತರಿಸುವದಕ್ಕಾಗಿ, ಹೊರತು ಉಳಿದವರೆಲ್ಲ ಪೋರ್ತುಗೀಸರು. ಈ ನಿಯಂತ್ರಕರ ಸಾಮರ್ಥ್ಯ, ಜ್ಞಾನಗಳ ಬಗ್ಗೆ ಹಲವು ದಂತಕತೆಗಳು ಪ್ರಚಾರಕ್ಕೆ ಬಂದಿವೆ ಎಂದ ಬಳಿಕ ಅವರ ಮೌಢ್ಯವನ್ನು ಬೇರೆ ಹೇಳಬೇಕಿಲ್ಲ.

(ಮುಂದುವರೆಯುದು)





ಕರ್ಮವೀರ
# ಹರಿಜನ ಪುರವಣಿ

## ಅಗಸ್ಟ ಒಂಭತ್ತು

ಎಪ್ರಿಲ ೬, ಎಪ್ರಿಲ ೧೩ ಮತ್ತು ಜಾನೇವಾರಿ ೨೬ ರಂತೆ, ಅಗಸ್ಟ ೯ ಹಿಂದುಸ್ತಾನದ ಸ್ವಾತಂತ್ರ್ಯ ಸಮರದಲ್ಲಿ ಅತ್ಯಂತ ಸಂಸ್ಮರಣೀಯ ದಿನ. ಸತ್ಯಾಗ್ರಹ- ಸತ್ಯ ಅಹಿಂಸಾ-ಶಾಸ್ತ್ರದಂತೆ ಅವು ಸಾರ್ವತ್ರಿಕ ಹರತಾಳದ ದಿನಗಳು. ಆದರಿಂದ ಸತ್ಯಾಗ್ರಹ ದೃಷ್ಟಿಯಿಂದ ವಿಚಾರ ಮಾಡಿದರೆ ಹರತಾಳ ನಿಷೇಧಪರವಾಗಿವೆ; ವಿಶೇಷತಃ ಬರುವ ಅಗಸ್ಟ ೯ ಕ್ಕೆ. ಹರತಾಳಗಳು ಹಿಂಸೆಯ ಸಂಕೇತವಾಗಿದ್ದರೆ ಅವು ಉಚಿತವಾಗುವವು.

ಕಾಂಗ್ರೆಸ್ ಅಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರು ಮತ್ತು ಸೊಶಾಲಿಸ್ಟ ಪಕ್ಷದ ಅಧ್ಯಕ್ಷರಾದ ಶ್ರೀ ಜಯಪ್ರಕಾಶ ನಾರಾಯಣರಂಥ ಮಹಾವ್ಯಕ್ತಿಗಳು ಈ ಸಂಬಂಧದಲ್ಲಿ ಹೇಳಿರುವರು. ತಮ್ಮ ಮಾತೃಭೂಮಿಯ ಅತ್ಯಂತಿಕ ಪ್ರೇಮಿಗಳಾದ ಇಬ್ಬರು ಮಹನೀಯರು ಪರಸ್ಪರ ವಿರುದ್ಧ ಹೇಳಿರುವಾಗ ನನ್ನಂಥವನಿಗೆ ನನ್ನ ಅಭಿಪ್ರಾಯ ವ್ಯಕ್ತ ಮಾಡುವುದು ಅತ್ಯಂತ ಸೂಕ್ಷ್ಮ ಸಂಗತಿ. ಆದರೆ ಸತ್ಯಾಗ್ರಹಿಯಾದ ನಾನು ನನ್ನ ಅಭಿಪ್ರಾಯ ವ್ಯಕ್ತ ಮಾಡಲಿಕ್ಕೆಬೇಕು

ಜಯಪ್ರಕಾಶ ನಾರಾಯಣರು ಕಾಂಗ್ರೆಸ್ಸಿಗರು. ಜಯಪ್ರಕಾಶರ ಅಭಿಪ್ರಾಯವೇನೇ ಇದ್ದರೂ ಕಾಂಗ್ರೆಸ ಕಾರ್ಯವನ್ನು ಅವರು ಅತ್ಯಂತ ಪ್ರಾಮಾಣಿಕತನದಿಂದ ಮಾಡುವರೆಂಬ ವಿಶ್ವಾಸದಿಂದ ಪಂಡಿತಜಿಯವರು ಅವರಿಗೆ ಸ್ವಾಭಾವಿಕವಾಗಿ ಕಾಂಗ್ರೆಸ್ ಕಾರ್ಯಸಮಿತಿಯಲ್ಲಿ ಒಂದು ಸ್ಥಾನ ಕೊಡಬಯಸಿದರು. ಈಗ ಕಾಂಗ್ರೆಸ್ ಅಧ್ಯಕ್ಷರ ಅಭಿಪ್ರಾಯ ವಿರುದ್ಧವಿರುವುದೆಂದು ಗೊತ್ತಾಗಿಯೂ ಅವರು ತಮ್ಮ ವಿರುದ್ಧ ಅಭಿಪ್ರಾಯಕ್ಕೆ ಬದ್ಧರಾಗುಳಿದರೆ ಕಾಂಗ್ರೆಸ್ಸಿಗೆ ದ್ರೋಹ ಬಗೆದಂತೆ ತೋರುವುದು. ಆದುದರಿಂದ ಅವರು ನನ್ನ ಅಭಿಪ್ರಾಯದ ಸಾಮಂಜಸ್ಯವನ್ನು ತಿಳಿದುಕೊಂಡು ತಮ್ಮ ಮಿಥ್ಯಾಸ್ಥಾನವನ್ನು ಬಿಟ್ಟುಗೊಟ್ಟು ತಮ್ಮ ಹೆಜ್ಜೆಯನ್ನು ಹಿಂದೆಗೆವ ಜಾಣತನವನ್ನು ಅವರು ತೋರಿಸುವರೆಂದು ನಾನು ಆಶಿಸುತ್ತೇನೆ.

ಕಾಂಗ್ರೆಸ್ ಕಾರ್ಯ ಸಮಿತಿ ಸರಿಯಾಗಿಯೊ ತಪ್ಪಾಗಿಯೊ ಒಂದು ಧೋರಣ ಸ್ವೀಕರಿಸಿದೆ. ಅಖಿಲ ಭಾರತ ಕಾಂಗ್ರೆಸ್ ಸಮಿತಿ ಅದಕ್ಕೆ ಒಪ್ಪಿಗೆ ಕೊಟ್ಟಿದೆ. ಘಟನಾ ಸಮಿತಿಯಲ್ಲಿಯ ಕಾರ್ಯ ಸರಿಯಾಗಿ ಸಾಗುವಂತೆ ವಾತಾವರಣವನ್ನುಂಟುಮಾಡಿ ಕಾಂಗ್ರೆಸ್ಸಿಗೆ ಘಟನಾ ಸಮಿತಿಯಲ್ಲಿ ಬೆಂಬಲ ಕೊಡುವದು ಪ್ರತಿಯೊಬ್ಬ ಕಾಂಗ್ರೆಸ್ಸಿಗನ ಕರ್ತವ್ಯ. ಬ್ರಿಟಿಶರ ಪ್ರತಿಯೊಂದು ಕೃತಿಯಲ್ಲಿ ಅವಿಶ್ವಾಸ ತಾಳುವವರು ಕೂಡ ಹೀಗೆ ಮಾಡತಕ್ಕದ್ದೆಂದು ನಾನು ಹೇಳಬಯಸುವೆನು. ತಮಗೆ ತೋರುವ ಗಂಡಾಂತರಗಳ ಬಗ್ಗೆ ಅವರು ಕಾಂಗ್ರೆಸ್ಸಿಗೆ ಎಚ್ಚರಿಕೆ ಕೊಡಬಹುದು. ಮೊನ್ನೆ ಕೂಡಿದ ಅ. ಭಾ. ಕಾ. ಸಿ. ಸಿ. ಸಭೆಯಲ್ಲಿ ಆ ಬಗೆಯ ಅಭಿಪ್ರಾಯ ವ್ಯಕ್ತಮಾಡಲು ಅಧ್ಯಕ್ಷರು ಅವರಿಗೆ ಸಂಪೂರ್ಣ ಅವಕಾಶ ಕೊಟ್ಟಿದ್ದರು. ಆ ವಿರೋಧವು ಆ ಮಿತಿ ಮೀರಿದ್ದಾದರೆ ದೇಶಕ್ಕೆ ಅದು ನಿಶ್ಚಿತವಾಗಿ ವಿಘಾತಕವಾಗುವುದು. ಅಗಸ್ಟ ೯ ನೇ ತಾರೀಕಿನ ಹರತಾಳ ಹಾಗಿದೆಂದು ನಾನು ಭಾವಿಸುತ್ತೇನೆ.

ನೆಂಟರೂ ಉಂಡಿರಬೇಕು ಗಂಟೂ ಖರ್ಚಾಗಿರಬಾರದು ಎಂದರೆ ಹೇಗೆ ಸಾಧ್ಯ? 'ಘಟನಾ ಸಮಿತಿ' ಮುಖಾಂತರ ಸ್ವಾತಂತ್ರ್ಯದ ಅಭಿವೃದ್ಧಿಗಾಗಿ ಅದಕ್ಕೆ ಸ್ವಾತಂತ್ರ್ಯ ಕೊಡಬೇಕು. ಸಹಾಯ ಮಾಡಲಿಕ್ಕೇಬೇಕು. ಆ ಉದ್ದೇಶಕ್ಕಾಗಿ ಸಮಿತಿಯ ಕಾರ್ಯವನ್ನು ಪ್ರಾಮಾಣಿಕ ರೀತಿಯಿಂದ ಮಾಡುವದು ನಿರರ್ಥಕ ಪ್ರಯತ್ನವಾಗಲಾರದು. ಕತ್ತಿಯನ್ನು ಹಾಕುವ ಮೊದಲೆ ಕಾಂಗ್ರೆಸ್ಸು ಕೋಳಿಯನ್ನು ಕೊಲ್ಲತಕ್ಕದ್ದಲ್ಲ.

ಅನಂತರ ದೇಶದಲ್ಲಿಯ ಪರಿಸ್ಥಿತಿಯನ್ನು ಲಕ್ಷಿಸಿರಿ. ಅಹಮದಾಬಾದ ಮತ್ತು ಉಳಿದ ಕಡೆಗಳಲ್ಲಿಯಂತೆ ದೇಶದಲ್ಲೆಲ್ಲ ತಿಳಿಗೆಟ್ಟ ಅಶಾಂತತೆ ಇದೆ. ಡಾ. ಅಂಬೇಡಕರರ ಸತ್ಯಾಗ್ರಹದ ಅಣಕವೂ ನಡೆದಿದೆ. ಸತ್ಯಾಗ್ರಹದಲ್ಲಿ ಕಾರಣವು ನ್ಯಾಯ್ಯ ಮತ್ತು ಸ್ಪಷ್ಟವಿರಬೇಕಲ್ಲದೆ ಸಾಧನವೂ ಹಾಗಿರಬೇಕು. ಸಾಧನ ಅಹಿಂಸಾತ್ಮಕವಾಗಿದ್ದರೂ ಕಾರಣವು ಅಸ್ಪಷ್ಟವಿದೆಂಬುದು ನಿಶ್ಚಿತ.

ಅಂಚೆ ಪೇದೆಗಳ ಸಂಪು ನ್ಯಾಯ್ಯವಾಗಿರಬಹುದಾಗಿದ್ದರೂ ಮುಂಬಯಿ ಮತ್ತು ಉಳಿದ ಕಡೆ ಅವರಿಗೆ ಸಹಾನುಭೂತಿ ತೋರುವದಕ್ಕೆಂದು ವ್ಯವಹಾರ ನಿಲ್ಲಿಸಿದ್ದರ ಜಾಣತನದ ಬಗ್ಗೆ ನನಗೆ ಸಂಶಯ. ಅನೇಕರು ತಮ್ಮ ವಿಚಾರಶಕ್ತಿಯ ಉಪಯೋಗ ಮಾಡುವದನ್ನೆ ಬಿಟ್ಟುಗೊಟ್ಟಂತೆ ತೋರುತ್ತದೆ. ಸಾರಾಸಾರ ವಿಚಾರಮಾಡದೆ ಅವರ್‍ಯಾವದರೊಂದು ಮಾಡುವಂತೆ ತೋರುತ್ತದೆ. ಈ ಪರಿಸ್ಥಿತಿಯಲ್ಲಿ ಹರತಾಳ ಆಚರಿಸಬೇಕೆಂದು ಹೇಳುವದು ಅಶಾಂತತೆಯನ್ನು ಬರಮಾಡಿಕೊಂಡಂತೆ. ಸ್ವಾತಂತ್ರ್ಯದ ಅಭಿವೃದ್ಧಿಗೆ ಯಾವದೇ ಬಗೆಯ ಅಶಾಂತತೆ ಸಹಾಯಕವಾಗದು. ಎಲ್ಲ ದೃಷ್ಟಿಯಿಂದ ವಿಚಾರಮಾಡಿದರೂ ಹಿಂದುಸ್ತಾನದಲ್ಲಿ ಬರುವ ಅಗಸ್ಟ ೯ ಕ್ಕೆ ಹರತಾಳವನ್ನಾಚರಿಸ ಕೂಡದೆಂದು ನನ್ನ ಆಸೆ, ಕಾಂಗ್ರೆಸ ಅಧ್ಯಕ್ಷರು ಸಲಹೆಕೊಟ್ಟಂತೆ ಶಾಂತ ಮತ್ತು ಗೌರವಪೂರ್ವಕ ವ್ಯವಸ್ಥಿತ ರೀತಿಯಿಂದ ಆದಿನವನ್ನಾಚರಿಸಬೇಕು.

ಪಂಚಗಣಿ ಮೋ. ಕ ಗಾಂಧಿ
೨೭-೭-೪೬

## ಬಟ್ಟೆಯ ಕೊರತೆ

ಖಾದಿ ಮತ್ತು ಗ್ರಾಮೋದ್ಯೋಗಗಳಲ್ಲಿ ಆಸ್ಥೆ ವಹಿಸುತಿರುವ ಶ್ರೀ. ಮನು ಸುಭೇದಾರರು ಕೆಲ ದಿನಗಳ ಹಿಂದೆ ಕೆಳಗಿನ ಟಿಪ್ಪಣಿಗಳನ್ನು ನನ್ನ ಕಡೆಗೆ ಕಳಿಸಿದರು. "ಹರಿಜನ"ದಲ್ಲಿ ಪ್ರಸಿದ್ಧಿಸುವದಕ್ಕಿಂತ ಹೆಚ್ಚು ಪರಿಣಾಮಕಾರಕ ಉಪಯೋಗ ಅವುಗಳಿಂದ ಮಾಡಬಯಸಿ ನಾನು ಅವುಗಳ ಪ್ರಸಿದ್ಧಿಯನ್ನು ಸ್ವಲ್ಪ ವಿಲಂಬಿಸಿದೆನು. ಆದರೆ ನನಗೆ ಅವೇನು ಹೊಳೆಯಲೊಲ್ಲವು. ಅದುದರಿಂದ ಪ್ರಾಂತಿಕ ಸರಕಾರಗಳ ಅಷ್ಟೆ ಅಲ್ಲದೆ ಕಾರ್ಯಕ್ಷೇತ್ರವೆಷ್ಟೇ ಮರ್‍ಯಾದಿತವಾಗಿದ್ದರೂ ಖಾಸಗಿ ವ್ಯಕ್ತಿಗಳ ಇಲ್ಲವೆ ಸಂಸ್ಥೆಗಳ ಉಪಯೋಗಕ್ಕಾಗಿಯೆಂದೂ ನಾನವನ್ನು ಪ್ರಸಿದ್ಧಿಸುವೆ.

ಸುಭೇದಾರರ ಯೋಜನೆಯಿಂತಿದೆ—

"ಒಂದು ಹಳ್ಳಿಗೆ ಸಾಮೂಹಿಕವಾಗಿ ಒಂದು ಅರಳೆಯ ಬೇಲು ಕೊಡತಕ್ಕದ್ದು. ಆ ಹಳ್ಳಿಯ ಜನರು ನೂಲು ತೆಗೆಯಬೇಕು. ಈ ನೂಲನ್ನು ಜೋಡೆಳೆಗಾಗಿ ಇಲ್ಲವೆ ಅಡ್ಡೆಳೆಗಾಗಿ ಉಪಯೋಗಿಸಿ ಬಟ್ಟೆಯನ್ನು ಮಾಡಬೇಕು.

ಒಂದು ಬೇಲು ಅರಳೆಯಿಂದ ಸುಮಾರು ೨೪೦೦ ಗಜ ಬಟ್ಟೆಯಾಗುವದು. (ಇಲ್ಲವೆ ನೂಲಿನ ನಂಬರಿನಂತೆ ೧೮೦೦ ಗಜ) ರಾಟಿ ಮತ್ತು ತಕಲಿಗಳು ಬೇಕಾದರೆ ಸರಕಾರದವರು ಅವುಗಳನ್ನೊದಗಿಸಬೇಕು (ತುರಂಗಗಳಲ್ಲಿ ಉತ್ಪಾದನೆಯ ಕೆಲಸ ನಡೆಯಬೇಕು.)

"ಬಟ್ಟೆ ಸಿದ್ಧವಾದ ಬಳಿಕ ಸೀದಾಪದ್ಧತಿಯಿಂದ ಆ ಹಳ್ಳಿಯ ಜನರಿಗೆ ಒದಗಿಸಬೇಕು."

"ಯಾವ ಹಳ್ಳಿಗಳ ರೈತರ ಕಡೆಗೆ ಧಾನ್ಯದ ಉಳಿತಾಯವಿದೆಂದು ತಿಳಿದು ಬರುವದೋ ಆ ಹಳ್ಳಿಯಲ್ಲಿಯ ಧಾನ್ಯಸಂಗ್ರಹಿಸುವದು ಮಹತ್ವದ್ದೆನಿಸಿದಾಗ ಧಾನ್ಯದ ವಿನಿಮಯದಿಂದಲೆ ಅಲ್ಲಿ ಬಟ್ಟೆಯನ್ನು ಪೂರೈಸಬೇಕು. ಉಳಿದ ಸಂದರ್ಭಗಳಲ್ಲಿ ಹಳ್ಳಿಯ ಜನರು ಅರಳೆಯ ಬೆಲೆಗಾಗಿ ಸಾಕಷ್ಟು ಸಂಗ್ರಹಿಸಬೇಕು. ಬೇರೆ ಶಬ್ದಗಳಲ್ಲಿ ಹೇಳುವದಾದರೆ ಅರಳೆಯ ಬೆಲೆಯನ್ನು ಕೊಟ್ಟು ಬಟ್ಟೆಯನ್ನು ಅವರು ಪಡೆಯತಕ್ಕದ್ದು. (ಈ ಬೆಲೆಯನ್ನು ಮೊದಲು ಸರಕಾರದವರು ಕೊಟ್ಟಿರುವರು.)

"ಬಟ್ಟೆಯ ಕೊರತೆ ಹಿಂಗಿದಾಗ ಅರಳೆಯ ಉಳಿಕೆಯನ್ನೂ ಒಯ್ಯಬಹುದು. ಅದರಿಂದ ಹತ್ತಿ ಬೆಳೆಯುವವನಿಗೆ ಸಹಾಯವಾಗುವದು.

"ಹಳ್ಳಿಯ ಪಂಚನು ಈ ಅರಳೆಯ ಬೇಲು ತೆಗೆದುಕೊಳ್ಳಬೇಕು. ಮತ್ತು ಇದನ್ನೆಲ್ಲ ಮಾಡಬೇಕು. ಇದರ ಪ್ರಾರಂಭವನ್ನು ಇಂತು ಮಾಡಬೇಕು.

೧) ಗ್ರಾಮೋದ್ಯೋಗ

೨) ಸಂಯುಕ್ತ ಮತ್ತು ಸಾಮೂಹಿಕ ಪ್ರಯತ್ನ

೩) ಸಣ್ಣವರು ದೊಡ್ಡವರೆನ್ನದೆ ಎಲ್ಲರೂ ತಮ್ಮ ದೈಹಿಕ ಶ್ರಮವನ್ನೊದಗಿಸಬೇಕು.

೪) ನಡುವಿನ ದಲ್ಲಾಳನ ಕೈವಾಡ ಮೀರತಕ್ಕದ್ದಲ್ಲ.

"ಮುಂಬಯಿ ಪ್ರಾಂತದಲ್ಲಿಯ ೨೦ ಸಾವಿರ ಹಳ್ಳಿಗಳಲ್ಲಿ ಇಲ್ಲವೆ ಕನಿಷ್ಠ ೨ ಸಾವಿರ ಹಳ್ಳಿಗಳಲ್ಲಿ ಯಾದರೂ ಈ ಪ್ರಯೋಗವನ್ನು ಪ್ರಾರಂಭಿಸಿದ್ದಾದರೆ ಮುಂದಿನ ಆರು ವಾರಗಳಲ್ಲಿ ಪರಿಣಾಮ ಕಂಡು ಬರುವದು.

"ಒಂದು ಬೇಲಿಗೆ ೨೨೫ ರೂಪಾಯಿಗಳಂತೆ ಸರಕಾರದವರು ಅರಳೆಯಲ್ಲಿ ಹಣ ಹಾಕಬೇಕಾಗುವದು. ಈ ಹಣದಲ್ಲಿ ಬಹಳಷ್ಟು ಹಣ ಧಾನ್ಯರೂಪದಲ್ಲಿ ಇಲ್ಲವೆ ರೋಖ ತಿರುಗಿ ಬರುವದು. ಆದರೆ ಹಳ್ಳಿಗರು ತಾವಾಗಿಯೆ ಮಾಡಬಲ್ಲ ಕೆಲವೊಂದು ಕಾರ್ಯದ ಪ್ರಾರಂಭವನ್ನು ಮಾಡಿದಂತಾಗುವದು.

"ಮಗ್ಗಗಳಿಲ್ಲದಲ್ಲಿ ಸಹಾಯ ಸಲ್ಲಿಸಬೇಕಾಗುವದು. ತೆಗೆದ ನೂಲು ಜೋಡೆಳೆಗಾಗಿ ಇಲ್ಲವೆ ಅಡ್ಡ ಎಳೆಗಾಗಿ ಉಪಯೋಗಿಸಲು ಸಾಧ್ಯವಿಲ್ಲದ ಸಂದರ್ಭದಲ್ಲಿಯೂ ಸಹಾಯ ಮಾಡಬೇಕಾಗುವದು. ಆದರೆ ಇವೆಲ್ಲ ವಿವರಗಳನ್ನು ಆಯಾ ಸ್ಥಳಗಳಲ್ಲಿಯ ಕಾರ್ಯಕರ್ತರೆ ಸರಿಪಡಿಸಿಕೊಳ್ಳಬಹುದು.

"ಮೊದಲಿನ ಬೇಲಿನ ಹಣ ಬಂದ ಕೂಡಲೆ ಸರಕಾರದವರು ಮತ್ತೊಂದು ಬೇಲು ಅರಳೆ ಕಳಿಸತಕ್ಕದ್ದು."

ನಾನು ಸೂಚಿಸಿದ್ದಕ್ಕೆ ಇದು ಭಿನ್ನವಾಗಿದೆ. ನನ್ನ ಅಭಿಪ್ರಾಯದಲ್ಲಿ ಮೊದಲನೆಯದು ಹೆಚ್ಚು ಒಳ್ಳೇದು. ಆದರೆ ಮನು ಸುಭೇದಾರರು ಸ್ವತಃ ಅರ್ಥಶಾಸ್ತ್ರಜ್ಞರಿದ್ದು ನನ್ನ ಸಹಾಯ ಪಡೆಯದೆ ತಾವೇ ಅಂಕಿಸಂಖ್ಯೆಗಳನ್ನು ಹಾಕಿ ಈ ಯೋಜನೆಯನ್ನು ಸಿದ್ಧಪಡಿಸಿ ಒಂದು ಅರಳೆ ಬೇಲಿನಿಂದಲೇ ಪ್ರಾರಂಭಿಸಿದ್ದರಿಂದ ಅವರ ಯೋಜನೆಗೆ ನಾನು ಹೆಚ್ಚು ಮಹತ್ವ ಕೊಡುತ್ತೇನೆ. ಮಾನವನ ಯಾವ ಯೋಜನೆಯಲ್ಲಿಯೂ ದೋಷ ಹುಡುಕಬಹುದು. ಆ ದೋಷಗಳನ್ನು ತೆಗೆದು ಹಾಕಬಹುದಾದರೆ ಹಾಗೆ ಮಾಡಬೇಕು; ಆದರೆ ಅದು ಶಕ್ಯವಿಲ್ಲದಿದ್ದರೂ ಕಾರ್ಯ ಪ್ರಾರಂಭ ಮಾಡಬೇಕು. ಪರಿಪೂರ್ಣಾವಸ್ಥೆಯನ್ನು ಹೊಂದುವವರೆಗೆ ತಡೆದರೆ ಯಾವ ಸುಧಾರಣೆಯೂ ಸಾಧ್ಯವಾಗಲಾರದು.

ಪಂಚಗಣಿ ಮೋ. ಕ. ಗಾಂಧಿ
೨೫-೭-೪೬

## ಪ್ರಶ್ನ—ಪೆಟ್ಟಿಗೆ

ಪ್ರಶ್ನೆ— ಆಹಾರ ಧೋರಣೆ ಪ್ರಾಂತಿಕ ಗವರ್ನರರ ಸಲಹೆಗಾರರ ಅಧೀನದಲ್ಲಿರುವಾಗ ಅವರನ್ನು ನಿಯಂತ್ರಿಸುವ ಪರಿಣಾಮಕಾರಿಯಾದ ಶಕ್ತಿ ಯಾವದೂ ಇರಲಿಲ್ಲ. ಹೊಣೆಗಾರ ಪ್ರಾಂತಿಕ ಸರಕಾರಗಳ ಆಡಳಿತದಲ್ಲಿ ಪರಿಸ್ಥಿತಿ ಭಿನ್ನವಾಗಿದೆ. ಮಂತ್ರಿಗಳು ಸೀದಾ ಅಂಗಡಿಗಳಲ್ಲಿ ತಮ್ಮ ಸೀದಾ ತಗೆದುಕೊಳ್ಳುವದು ಬೇರೆ ಕಡೆಯಿಂದ ಒಂದು ಕಾಳು ಕೂಡ ಹೆಚ್ಚಿಗೆ ತಗೆದುಕೊಳ್ಳದಂತೆ ನೋಡಿಕೊಳ್ಳುವುದು ಅವರ ಸದಸದ್ವಿವೇಕ ಬುದ್ಧಿಗೆ ಉಚಿತವಾಗಿರುವುದಿಲ್ಲವೆ? ಇದರಿಂದ ಕೂಡಲೆ ಬಹಳ ಇಷ್ಟ ಪರಿಣಾಮವಾಗುವದು. ಇಂದು ಆಹಾರ ಪದಾರ್ಥಗಳ ನಿಯಂತ್ರಣ ಇಲ್ಲವೆ ಬಟ್ಟೆಯ ನಿಯಂತ್ರಣ ಕೇಂದ್ರಗಳೆಲ್ಲ ಕೇವಲ ಕಳ್ಳತನ ಮತ್ತು ಲಂಚಗುಳಿತನದ ಅಡ್ಡೆಗಳಾಗಿ ಪರಿಣಮಿಸಿವೆ. ಈ ರೀತಿಯಾಗಿ ಮಂತ್ರಿಗಳು ಆಚರಿಸಿದ್ದಾದರೆ ಅವರಲ್ಲಿ ಒಂದು ಬಗೆಯ ನೈತಿಕ ಶಕ್ತಿ ಬರುವುದು. ಆದರಿಂದ ಅವರು ಈ ಕಳವು, ಲಂಚಗುಳಿತನಗಳನ್ನು ಯಶಸ್ವಿಯಾಗಿ ಹೋರಾಡಲು ಸಮರ್ಥರಾಗುವರು.

ಉತ್ತರ— ಅನೇಕರಿಂದ ಬಂದ ತಕರಾರುಗಳ ಪತ್ರಗಳ ಸಾರವೇ ಈ ಪ್ರಶ್ನೆ. ಈ ಪ್ರಶ್ನೆಯಲ್ಲಿ ಮಾಡಿದ ಸೂಚನೆಗೆ ನನ್ನ ಸಂಪೂರ್ಣ ಒಪ್ಪಿಗೆಯಿದೆ. ಆದರೆ ಮಂತ್ರಿಗಳಷ್ಟೇ ಅಲ್ಲದೆ ಉಳಿದ ಸರಕಾರಿ ನವಕರರು ಈ ಸೂಚನೆಯಂತೆ ಧಾನ್ಯ ಸೀದಾ ಪಡೆಯುತ್ತಿರುವರೆಂದು ನನಗನಿಸುತ್ತದೆ. ಧಾನ್ಯ ಪದಾರ್ಥಗಳನ್ನು ಪಡೆಯುವುದಕ್ಕಾಗಿ ಕಳ್ಳಪೇಟೆಯ ಹೊರತು ಬೇರೆ ಯಾವ ಸಾಧನ ಇದೆಂಬುದು ನನಗೆ ಗೊತ್ತಿಲ್ಲ. ಅಧಿಕಾರದಲ್ಲಿದ್ದವರು ಒಳ್ಳೆ ಮೇಲ್ಪಂಕ್ತಿಯನ್ನು ಹಾಕಿಕೊಡುವುದು ಹೆಚ್ಚು ಒಳಿತೆಂಬುದು ನಿಶ್ಚಿತ. ಸಾರ್ವಜನಿಕರಿಗೆ ಯಾವ ಸಂಗ್ರಹದಿಂದ ಧಾನ್ಯ ಸಿಕ್ಕುವುದೋ ಅಲ್ಲಿಂದಲೆ ಅವರು ತಮ್ಮ ಸೀದಾ ಪದಾರ್ಥಗಳನ್ನು ಪಡೆದುಕೊಂಡರೆ ಕೊಳೆತ ಇಲ್ಲವೆ ಕೆಟ್ಟ ಆಹಾರ ಪದಾರ್ಥಗಳನ್ನು ಕೊಡುವದು ಇಷ್ಟವಲ್ಲೆಂದು ಸೀದಾ ಅಧಿಕಾರಿಗಳು ತಿಳಿಯುವರು. ಇಂಗ್ಲಂಡದಲ್ಲಿ ಮಂತ್ರಿಗಳು ಮತ್ತು ಉಳಿದ ಉಚ್ಚಾಧಿಕಾರಿಗಳು ಸಾರ್ವಜನಿಕರ ಸಂಗ್ರಹಾಲಯಗಳೊಳಗಿಂದಲೆ ಧಾನ್ಯ ಪದಾರ್ಥಗಳನ್ನು ಪಡೆಯುವರೆಂದು ನನಗೆ ತಿಳಿಯುತ್ತದೆ. ಸಾಮಾನ್ಯವಾಗಿ ಇದೇ ಬಗೆಯ ರೂಢಿಯಿರತಕ್ಕದ್ದು.

ಪಂಚಗಣಿ ಮೋ. ಕ. ಗಾಂಧಿ
೨೮—೭—೪೬

ಪ್ರಶ್ನೆ— ನಿಮ್ಮ ಸಲಹೆಯಂತೆ ನಾನು ರಾಮನಾಮವನ್ನು ಪಠಿಸುತಿರುತ್ತೇನೆ. ಮತ್ತು ಅದರಿಂದ ನನಗೆ ಒಳಿತಾಗಹತ್ತಿದೆ. ಕ್ಷಯರೋಗಕ್ಕಾಗಿ ವೈದ್ಯಕೀಯ ಉಪಚಾರವನ್ನೂ ಪಡೆಯುತಿರುವೆನು. ಮಿತಾಹಾರ ಮತ್ತು ಯೋಗ್ಯ ಆಹಾರ ತೆಗೆದುಕೊಳ್ಳುವುದರಿಂದ ಮನುಷ್ಯನು ನಿರೋಗಿಯಾಗುವನಲ್ಲದೆ ಅವನ ಆಯುಷ್ಯಾಭಿವೃದ್ಧಿಯೂ ಆಗುವುದೆಂದು ನೀವು ಹೇಳಿರುವಿರಿ. ಕಳೆದ ೨೫ ವರ್ಷಗಳಿಂದ ನಾನು ಬಿಟ್ಟೂಬಿಡದೆ ಆಹಾರ ನಿಯಮವನ್ನು ಅನುಸರಿಸುತ್ತ ಬಂದಿದ್ದೇನೆ. ಆದರೆ ನಾನು ಕ್ಷಯರೋಗಕ್ಕೇಕೆ ಬಲಿಯಾಗಬೇಕು? ಈ ಜನ್ಮದಲ್ಲಿ ಇಲ್ಲವೆ ಹಿಂದಿನ ಜನ್ಮದಲ್ಲಿಯ ನನ್ನ ಪ್ರಾಕೃತವೇ ಇದಕ್ಕೆ ಕಾರಣವೆಂದು ನಾನು ಭಾವಿಸಬೇಕೋ?

ಮನುಷ್ಯನು ೧೨೫ ವರ್ಷ ಬಾಳಬಹುದೆಂದು ನೀವು ಹೇಳುವಿರಿ. ನಿಮಗಿಷ್ಟೊಂದು ಉಪಯುಕ್ತರಾಗಿದ್ದ ಮಹಾದೇವಭಾಯರನ್ನು ಪರಮಾತ್ಮನು ಏಕೆ ಮರೆಮಾಡಬೇಕಿತ್ತು? ಅವರು ಮಿತಾಹಾರಿಗಳಾಗಿದ್ದರು ಮತ್ತು ಒಳ್ಳೆ ಪಥ್ಯದ ಆಹಾರವನ್ನೆ ತೆಗೆದುಕೊಳ್ಳುತ್ತಿದ್ದರು ಮತ್ತು ದೇವರಂತೆ ನಿಮ್ಮ ಸೇವೆ ಮಾಡಿದರು. ಅವರಿಗೆ ರಕ್ತದ ಒತ್ತಡವೇಕಾಯಿತು? ಪರಮಾತ್ಮನ ಅವತಾರವೆಂದು ಭಾವಿಸಲ್ಪಡುತಿದ್ದ ರಾಮಕೃಷ್ಣ ಪರಮಹಂಸರು ಕ್ಷಯರೋಗಕ್ಕಿಂತ ಘಾತಕವಾದ ಕ್ಯಾನ್ಸರ ರೋಗಕ್ಕೆ ಏಕೆ ತುತ್ತಾಗಬೇಕು?

—೧೦ನೇ ಪುಟ ನೋಡಿರಿ

# ನಾಲ್ಕು ವರ್ಷಗಳ ನಂತರ

## ಸಂಚಾರಿ ನಾರದ

ಅಸಫಲವಾದ ಮಹಾಧ್ಯೇಯಗಳ ಬೆಂಬತ್ತಿ ಸಂಚರಿಸುತ್ತ ಶುದ್ಧ ನಾರದನಂತೆಯೆ ಆಗಿಬಿಟ್ಟಿರುವ ಲುಯಿ ಫಿಶರರು ಈ ವಾರ ಪಂಚಗಣಿಯಲ್ಲಿ ಗಾಂಧೀಜಿಯ ಮೇಲೆ ಎರಗಿದರು. ಘನವಾದ ಧ್ಯೇಯಗಳನ್ನು ಎತ್ತಿಹಿಡಿಯುವದು ಅವರ ಪಾಲಿಗೆ ಆಹಾರ ನಿದ್ರೆಗಳಷ್ಟೇ ಅನಿವಾರ್ಯವಾದ ಅವಶ್ಯಕತೆಯಾಗಿದೆ. ಹಿಂದುಸ್ತಾನದ ಸಮಸ್ಯೆ ಜಾಗತಿಕ ಶಾಂತಿಯ ಮೇಲೆ ಪ್ರಚಂಡ ಪರಿಣಾಮ ಮಾಡುವದೆಂದು ಅವರು ಅಭಿಪ್ರಾಯಪಡುತ್ತಾರೆ. ೧೯೪೨ ರಲ್ಲಿ ಗಾಂಧೀಜಿಯ ಸಂದರ್ಶನ ತೆಗೆದುಕೊಂಡಾಗ, "ಚಲೇಜಾವ" ಯೋಜನೆಯಲ್ಲಿದ್ದ ಒಂದು ಮಹತ್ವದ ಬಿರುಕನ್ನು ಕಂಡುಹಿಡಿದು ಅದನ್ನು ಮುಚ್ಚಲು ಗಾಂಧೀಜಿಗೆ ಅವರು ಸಹಾಯ ಮಾಡಿದ್ದರು. ಈಗ ಹಿಂದುಸ್ತಾನ ಮತ್ತೊಮ್ಮೆ ಕವಲುದಾರಿಯಲ್ಲಿ ಬಂದು ನಿಂತಿದೆಯಾಗಿ, ಲುಯಿ ಫಿಶರರಿಗೆ ಪುನಃ ಇಲ್ಲಿ ಕೆಲಸ ಮಾಡಬೇಕೆನಿಸಿತು.

ಅವರು ಪುಣೆಯಲ್ಲಿ ಅ. ಭಾ. ಕಾಂ. ಅಧಿವೇಶನಕ್ಕಿಂತ ಮೊದಲೊಮ್ಮೆ ಗಾಂಧೀಜಿಯನ್ನು ಕಂಡಿದ್ದರು. ಆದರೆ ಅದರಿಂದ ಅವರಿಗೆ ಪೂರ್ಣ ತೃಪ್ತಿಯಾಗಲಿಲ್ಲ. "ಯಾಕೋ ಕಾಣೆ, ೧೯೪೨ ರಲ್ಲಿ ಆದಂತೆ ಈ ಸಲ ಮುಖ್ಯ ಸಮಸ್ಯೆಯ ಹಿಡಿತ ನನಗೆ ಸಿಗಲಿಲ್ಲ", ಎಂದು ಅವರು ಅನಂತರ ಉಸುರಿದರು. ಅದಕಾಗಿ ಈ ಬಾರಿ ಬೆನ್ನುಬೆನ್ನಿಗೆ ಎರಡು ದಿನಗಳಲ್ಲಿ ಗಾಂಧೀಜಿಯನ್ನು ಮೂರು ಸಲ ಸಂದರ್ಶಿಸಿ ಅವರು ಸೇಡು ತೀರಿಸಿಕೊಂಡರು. ಅವರಿಬ್ಬರ ಮಾತುಕತೆಗಳು ಬಗೆಬಗೆಯ ವಿಷಯಗಳನ್ನು ತುಡುಕಿದವು. ಸಂಕಲ್ಪಿತ ಘಟನಾ ಸಮಿತಿ, ಹಿಂದೂ-ಮುಸ್ಲಿಂ ಸಮಸ್ಯೆ, ಅಸ್ಪೃಶ್ಯತೆಗಳಿಂದ ಹಿಡಿದು ಸಾಮ್ಯವಾದ, ಅಹಿಂಸೆ, ದಕ್ಷಿಣ ಆಫ್ರಿಕೆಯ ಮೇಲೆ ಕೈಕೊಂಡ ಪ್ರತೀಕಾರಕ್ರಮ ಇವುಗಳವರೆಗೆ ಹಲವು ಸಂಗತಿಗಳು ಬಂದುಹೋದವು. ಗಹನ ಚರ್ಚೆಗಳಿಂದುಂಟಾದ ಶ್ರಮವನ್ನು ಪರಿಹರಿಸಲು ನಡುನಡುವೆ ಹುಸಿ ಗುಂಡುಗಳು ಹಾರುತಿದ್ದವು.

## ಸಾರ್ವಭೌಮ ಸಂಸ್ಥೆ ?

ಘಟನಾ ಸಮಿತಿಯ ಪ್ರಶ್ನೆಯ ಉದ್ಘಾಟನೆಯೊಂದಿಗೆ ಲುಯಿ ಫಿಶರರು ಚರ್ಚೆಯನ್ನು ಮೊದಲು ಮಾಡಿದರು. "ನಾನು ಘಟನಾ ಸಮಿತಿಯನ್ನು ಪ್ರವೇಶಿಸಿ ಅದನ್ನು ಬೇರೆಯೇ ಉದ್ದೇಶಕ್ಕಾಗಿ ಬಳಸಿಕೊಂಡೇನು. ಅದನ್ನು ರಣರಂಗವಾಗಿ ಮಾಡಿ ಅದು ಸಾರ್ವಭೌಮ ಅಥವಾ ಸ್ವಯಂಪ್ರಭು ಸಂಸ್ಥೆಯೆಂದು ಸಾಧಿಸೇನು. ಇದಕ್ಕೆ ನೀವೇನನ್ನುವಿರಿ?"

"ಬೇರೊಬ್ಬರು ಉಂಟುಮಾಡಿದ ಸಂಸ್ಥೆಯನ್ನು ಸಾರ್ವಭೌಮ ಸಂಸ್ಥೆಯೆಂದು ಸಾರುವದರಿಂದ ಫಲವಿಲ್ಲ," ಎಂದರು ಗಾಂಧೀಜಿ. "ಎಷ್ಟೆಂದರೂ ಅದು ಬ್ರಿಟಿಶರು ಸೃಷ್ಟಿಸಿದ ಸಂಸ್ಥೆ. ಬರಿ ಸಾರಿಬಿಟ್ಟ ಮಾತ್ರಕ್ಕೆ ಯಾವ ಸಂಸ್ಥೆಯೂ ಸಾರ್ವಭೌಮ ಸಂಸ್ಥೆಯಾಗಲಾರದು. ಸಾರ್ವಭೌಮವೆನಿಸಬೇಕಾದರೆ ನೀವು ಸಾರ್ವಭೌಮ ರೀತಿಯಲ್ಲಿ ಅಥವಾ ಸ್ವಯಂಪ್ರಭುಗಳಂತೆ ವರ್ತಿಸಬೇಕಾಗುವದು. ಜೊಹಾನ್ಸಬರ್ಗಿನ ಕೂಲಿ ರಸ್ತೆಯ ಮೂವರು ದರ್ಜಿಗಳು ತಾವು ಸಾರ್ವಭೌಮ ಸಂಸ್ಥೆಯೆಂದು ಸಾರಿದರು. ಪರಿಣಾಮದಲ್ಲಿ ಅದರಿಂದೇನೂ ಹೊರಡಲಿಲ್ಲ. ಅದು ಬರಿ ಹಗರಣವಾಗಿತ್ತು, ಅಷ್ಟೆ.

"ಸಂಕಲ್ಪಿತ ಘಟನಾ ಸಮಿತಿ ಕ್ರಾಂತಿಕಾರಕ ಸಂಸ್ಥೆಯಲ್ಲವೆಂದು ನನ್ನ ತಿಳುವಳಿಕೆಯಲ್ಲ. ಈ ಘಟನಾ ಸಮಿತಿಯನ್ನು ವಿಧಾಯಕ ಸ್ವರೂಪದ ಸವಿನಯ ಶಾಸನಭಂಗದ ಬದಲು ಉಪಯೋಗಿಸಬಹುದೆಂದು ನಾನು ಹೇಳಿದ್ದೇನೆ, ಮತ್ತು ಅದನ್ನು ಅಕ್ಷರಶಃ ನಂಬುತ್ತೇನೆ. ನಮ್ಮ ಸಾಮ್ಯವಾದಿ ಗೆಳೆಯರ ತ್ಯಾಗ, ಬಲಿದಾನಗಳ ಬಗೆಗೆ ನನ್ನಲ್ಲಿ ನಿರತಿಶಯ ಆದರಬುದ್ಧಿಯುದೆಯಾದರೂ ಅವರ ಪದ್ಧತಿಗೂ ನನ್ನದಕ್ಕೂ ಇರುವ ವ್ಯತ್ಯಾಸವನ್ನು ನಾನೆಂದೂ ಮುಚ್ಚಿಟ್ಟಿಲ್ಲ. ಅವರು ಹಿಂಸೆಯಲ್ಲಿಯೂ ಅದರಲ್ಲಿ ಅಡಕವಾಗಿರುವ ಎಲ್ಲ ವಿಷಯಗಳಲ್ಲಿಯೂ ವಿಶ್ವಾಸವಿಟ್ಟಿದ್ದಾರೆ. ನನ್ನ ರೋಮರೋಮದಲ್ಲಿಯೂ ಅಹಿಂಸೆಯ ಮೇಲೆ ವಿಶ್ವಾಸ ಇದೆ."

## ಬೇರೆ ಬಗೆಯ ಸಾಮ್ಯವಾದಿ

ಇದು ಚರ್ಚೆಯನ್ನು ಸಾಮ್ಯವಾದದತ್ತ ತಿರುಗಿಸಿತು. "ನೀವೂ ಸಾಮ್ಯವಾದಿ, ಅವರೂ ಸಾಮ್ಯವಾದಿಗಳು" ಎಂದು ನಡುವೆ ಬಾಯಿ ಹಾಕಿದರು ಫಿಶರ್.

ಗಾಂಧೀಜಿ: "ನಾನೇ ಸಾಮ್ಯವಾದಿ— ಅವರಲ್ಲ. ಅವರಲ್ಲಿ ಎಷ್ಟೋ ಜನರು ಹುಟ್ಟುವ ಮೊದಲೇ ನಾನು ಸಾಮ್ಯವಾದಿಯಾಗಿದ್ದೆ. ಜೋಹಾನ್ಸಬರ್ಗಿನ ಉನ್ಮತ್ತ ಸಾಮ್ಯವಾದಿಯೊಬ್ಬನು ನನ್ನ ಕೈಲಿ ಮನವರಿಕೆ ಮಾಡಿಸಿಕೊಂಡ. ಆದರೆ ಆ ಮಾತು ಬೇರೆ. ಅವರ ಸಾಮ್ಯವಾದ ನಷ್ಟವಾದ ಮೇಲೂ ನನ್ನ ಸಾಮ್ಯವಾದಿತ್ವ ಬಾಳುವದು."

"ನಿಮ್ಮ ಸಾಮ್ಯವಾದವೆಂದರೆ ಏನದು ?"

"ನನ್ನ ಸಾಮ್ಯವಾದಕ್ಕೆ 'ಈ ಕನಿಷ್ಠನಿಗೆ ಕೂಡ' ( Even unto this last ) ಎಂದರ್ಥ. (ಅರ್ಥಾತ್ ಮೇಲು ಕೀಳೆನ್ನದೆ ಸರ್ವರಿಗೂ ಸುಖ). ಕುರುಡ, ಕಿವುಡ, ಮೂಕರ ಬೂದಿಯ ಮೇಲೆ ಭವನ ಕಟ್ಟಲು ನಾನು ಬಯಸುವದಿಲ್ಲ. ಅವರ ಸಾಮ್ಯವಾದದಲ್ಲಿ ಇವರಿಗೆ ಸ್ಥಾನವಿಲ್ಲೆಂದು ತೋರುತ್ತದೆ. ಅವರ ಹಿಂದೇ ಒಂದು ಉದ್ದೇಶವೆಂದರೆ ಭೌತಿಕ ಪ್ರಗತಿ. ಉದಾಹರಣೆಗಾಗಿ, ಒಬ್ಬೊಬ್ಬ ನಾಗರಿಕನಿಗೂ ಒಂದೊಂದು ಮೋಟಾರು ಇರಬೇಕೆಂಬುದು ಅಮೇರಿಕೆಯ ಗುರಿ. ನನ್ನ ಗುರಿ ಅದಲ್ಲ. ನನಗೆ ಬೇಕಾದುದು ನನ್ನ ವ್ಯಕ್ತಿತ್ವ ಪರಿಪೂರ್ಣವಾದ ಅಭಿವ್ಯಕ್ತಿಗೆ ಅವಶ್ಯವಾದ ಸ್ವಾತಂತ್ರ್ಯ. ಆಕಾಶಕ್ಕೆ ನಿಚ್ಚಣಿಕೆ ಕಟ್ಟಲು ನನ್ನ ಸಾಗಿ ಮಾಡುವ ಬಯಕೆಯಿದ್ದರೆ ಆ ಸ್ವಾತಂತ್ರ್ಯವೂ ನನಗೆ ಬೇಕು ಅಂದಮಾತ್ರಕ್ಕೆ ಹಾಗೇನಾದರೂ ಮಾಡಲು ನಾನು ಉಜ್ಜುಗಿಸುವೆನೆಂದು ಅರ್ಥವಲ್ಲ. ಆ ಇನ್ನೊಂದು ಸಾಮ್ಯವಾದದಲ್ಲಿ ವೈಯಕ್ತಿಕ ಸ್ವಾತಂತ್ರ್ಯವಿಲ್ಲ ನಮಗೆ ಯಾವುದರ ಒಡೆತನವೂ ಇಲ್ಲ— ನಮ್ಮ ಸ್ವಂತ ಮೈಯ ಒಡೆತನ ಕೂಡ."

"ನಿಜ. ಆದರೆ ಅದರಲ್ಲಿಯೂ ಪ್ರಕಾರಾಂತರಗಳಿವೆ. ರೂಪಾಂತರಗೊಂಡ ನನ್ನ ಸಾಮ್ಯವಾದದಲ್ಲಿ ಸರಕಾರಕ್ಕೆ ಎಲ್ಲದರ ಮೇಲೂ ಒಡೆತನವಿಲ್ಲ. ರಶಿಯಾದಲ್ಲೇನೋ ಹಾಗಿದೆ. ಅಲ್ಲಿ ಸತ್ಯವಾಗಿಯೂ ನಮ್ಮ ದೇಹ ಕೂಡ ನಮ್ಮ ಒಡೆತನಕ್ಕೆ ಒಳಪಟ್ಟ ವಸ್ತುವಲ್ಲ. ನೀವೇನೇ ಅಪರಾಧ ಮಾಡಿರದಿದ್ದರೂ ಯಾವಾಗ ಬೇಕಾದರೂ ನಿಮ್ಮ ಬಂಧನವಾಗಬಲ್ಲದು. ಅವರು ಮನಸುಬಂದಲ್ಲಿ ನಿಮ್ಮನ್ನು ಕಳಿಸಬಲ್ಲರು."

"ನಿಮ್ಮ ಸಾಮ್ಯವಾದದಲ್ಲಿ ಮಕ್ಕಳ ಮೇಲಿನ ಒಡೆತನ ಸರಕಾರಕ್ಕೇ ಇಲ್ಲವೆ? ಅದೇ ತನಗೆ ಬೇಕಾದಂತೆ ಅವರಿಗೆ ಶಿಕ್ಷಣ ಕೊಡುವದಲ್ಲವೆ?"

"ಎಲ್ಲ ಸರಕಾರಗಳೂ ಹಾಗೆಯೆ ಮಾಡುತ್ತವೆ. ಅಮೇರಿಕೆಯೂ ಹಾಗೆಯೆ."

"ಹಾಗಿದ್ದರೆ ಅಮೇರಿಕೆಗೂ ರಶಿಯಾಕ್ಕೂ ಬಹಳ ಹೆಚ್ಚುಕಡಿಮೆಯಿಲ್ಲ."

"ನಿಮ್ಮ ನಿಜವಾದ ಆಕ್ಷೇಪ ಸರ್ವಾಧಿಕಾರಿತ್ವದ ಮೇಲಿದೆ."

"ಆದರೆ ಸಾಮ್ಯವಾದವೆಂದರೇನೇ ಸರ್ವಾಧಿಕಾರಿತ್ವ. ಇಲ್ಲದಿದ್ದರೆ ಅದು ಬರಿ ಅರಾಮ ಕುರ್ಚಿಯ ತತ್ವಜ್ಞಾನವಾಗಿ ಉಳಿದೀತು. ನಾನು ನನ್ನನ್ನು ಕಮ್ಯುನಿಸ್ಟ ಅಥವಾ ಸಂಘವಾದಿಯೆಂದೂ ಹೇಳಿಕೊಳ್ಳುತ್ತೇನೆ."

"ಹಾ, ಬೇಡಬೇಡ! ನೀವು ಕಮ್ಯುನಿಸ್ಟರೆಂದು ಹೇಳಿಕೊಳ್ಳುವದು ಬಹಳ ಭಯಾನಕವಾಗಿದೆ. ನಿಮಗೆ ಬೇಕಾದುದು, ಜಯಪ್ರಕಾಶ ಮೊದಲಾದ ಸಾಮ್ಯವಾದಿಗಳಿಗೆ ಬೇಕಾದುದು ನನಗೂ ಬೇಕು. ನಮಗೆಲ್ಲ ಸ್ವತಂತ್ರ ಜಗತ್ತು ಬೇಕಾಗಿದೆ. ಆದರೆ ಕಮ್ಯುನಿಸ್ಟರಿಗೆ ಅದು ಬೇಕಾಗಿಲ್ಲ. ಅವರಿಗೆ ಬೇಕಾದುದು ದೇಹಬುದ್ಧಿಗಳೆರಡನ್ನೂ ದಾಸ್ಯದಲ್ಲಿ ಬಂಧಿಸಿಡುವ ಒಂದು ವ್ಯವಸ್ಥೆ."

"ಮಾರ್ಕ್ಸನ ವಿಷಯಕ್ಕೂ ನಿಮ್ಮದು ಇದೇ ಅಭಿಪ್ರಾಯವೊ?"

"ಕಮ್ಯುನಿಸ್ಟರು ಮಾರ್ಕ್ಸನ ಉಪದೇಶಗಳನ್ನು ತಮ್ಮ ಉದ್ದೇಶಸಾಧನೆಗಾಗಿ ಹೊಲಗೆಡಿಸಿದ್ದಾರೆ."

"ಲೆನಿನ್ನನ ಮಾತೇನು?"

"ಅದನ್ನು ಪ್ರಾರಂಭಿಸಿದವನೇ ಲೆನಿನ್, ಮುಂದೆ ಸ್ಟಾಲಿನ್ನನು ಅದನ್ನು ಮಾಡಿ ಮುಗಿಸಿದನು. ಕಮ್ಯುನಿಸ್ಟರು ನಿಮ್ಮಲ್ಲಿಗೆ ಬರುವಾಗ ಕಾಂಗ್ರೆಸ್ಸಿನಲ್ಲಿ ಹೊಕ್ಕು ಅದನ್ನು ವಶಪಡಿಸಿಕೊಂಡು ತಮ್ಮ ಉದ್ದೇಶಸಾಧನೆಗಾಗಿ ಅದನ್ನು ಉಪಯೋಗಿಸುವದೇ ಅವರ ಅಂತರಂಗದಲ್ಲಿರುತ್ತದೆ."

"ಸಾಮ್ಯವಾದಿಗಳಾದರೂ ಹಾಗೆಯೆ ಮಾಡಲೆಳಸುವವರು ನನ್ನ ಕಮ್ಯುನಿಜಂ ಸಾಮ್ಯವಾದಕ್ಕಿಂತ ಬಹಳ ಭಿನ್ನವಾಗಿಲ್ಲ. ಅದು ಅವೆರಡರ ಹದವರಿತ ಎರಕ. ನಾನು ಭಾವಿಸಿರುವ ಕಮ್ಯುನಿಜಂ ಸಾಮ್ಯವಾದದ ಸ್ವಾಭಾವಿಕ ಉಪಸಿದ್ಧಾಂತ."

"ನಿಜ, ಸರಿಯಾದುದನ್ನೆ ಹೇಳಿದಿರಿ. ಅವೆರಡರಲ್ಲಿಯ ಭೇದವನ್ನು ಗುರುತಿಸಬಾರದಂಥ ಕಾಲವೊಂದಿತ್ತು. ಆದರೆ ಇಂದು ಸಾಮ್ಯವಾದಿಗಳು ಕಮ್ಯುನಿಸ್ಟರಿಂದ ಬಹಳ ಭಿನ್ನರಾಗಿದ್ದಾರೆ."

"ಸ್ಟಾಲಿನ್ನನ ಮಾದರಿಯ ಕಮ್ಯುನಿಜಂ ಬೇಡವೆಂದು ನಿಮ್ಮ ಅಭಿಪ್ರಾಯವೇನೊ."

"ಆದರೆ ಹಿಂದೀ ಕಮ್ಯುನಿಸ್ಟರಿಗೆ ಹಿಂದುಸ್ತಾನದಲ್ಲಿ ಸ್ಟಾಲಿನ್ ಮಾದರಿಯ ಕಮ್ಯುನಿಜಂ ಬೇಕಾಗಿದೆ. ಅದಕ್ಕಾಗಿ ಅವರು ನಿಮ್ಮ ಹೆಸರನ್ನು ಉಪಯೋಗಿಸಿಕೊಳ್ಳಲು ಹವಣಿಸುತ್ತಾರೆ."

"ಅವರಿಗೆ ಇದರಲ್ಲಿ ಸಾಫಲ್ಯ ದೊರೆಯಲಾರದು."

## ಬ್ರಿಟಿಶರ ಪಾತ್ರ

ಫಿಶರರು ಪುನಃ ಘಟನಾ ಸಮಿತಿಯ ಕಡೆಗೆ ಹೊರಳಿದರು. "ಅಂತೂ ನೀವು ಸ್ವತಃ ಘಟನಾ ಸಮಿತಿಯಲ್ಲಿ ಪ್ರವೇಶಿಸುವದಿಲ್ಲ. ಆದರೆ ಅದಕ್ಕೆ ಬೆಂಬಲ ಕೊಡುವಿರಿ ಅಲ್ಲವೆ?"

"ಹೌದು ಆದರೆ ಅಧಿಕಾರವನ್ನು ಕಸಿದುಕೊಳ್ಳುವ ಸಲುವಾಗಿ ನಾವು ಘಟನಾ ಸಮಿತಿಯನ್ನು ಪ್ರವೇಶಿಸುವೆವೆಂಬುದು ಸರಿಯಲ್ಲ. ಅದು ಸಾರ್ವಭೌಮ ಸಂಸ್ಥೆಯಲ್ಲದಿದ್ದರೂ ಸಾರ್ವಭೌಮತ್ವಕ್ಕೆ ಸಾಧ್ಯವಿದ್ದಷ್ಟು ಸಮೀಪವಾಗಿದೆ."

"ಮೇ ೧೬ ರ ಸರಕಾರಿ ಪ್ರಕಟನೆಯನ್ನನುಸರಿಸಿ ಬ್ರಿಟಿಶರು ಒಂದು ಒಪ್ಪಂದವನ್ನು ಹೇರಲು ಪ್ರಯತ್ನಿಸಿದರೆ ತಾವು ಅದನ್ನು ಹರಿದು ಚೂರುಚೂರು ಮಾಡುವದಾಗಿ ಜವಾಹರಲಾಲರು ಹೇಳಿದ್ದಾರೆ."

"ಹೌದು, ಹೊರಗಿನವರಿಂದ ಒಪ್ಪಂದವೊಂದು ಹೊರಿಸಲ್ಪಟ್ಟರೆ."

"ಕಾಂಗ್ರೆಸ್ಸು ಗುಂಪುಗಳಲ್ಲಿ ಸೇರುವದಿಲ್ಲವೆಂದೂ ಅವರು ಹೇಳಿದ್ದಾರೆ".

"ಹೌದು. ನಾನೂ ಅದನ್ನೇ ಹೇಳಿದ್ದೇನೆ. ಫೆಡರಲ್ ಕೋರ್ಟು ಅಥವಾ ಇತರ ಯಾವದೇ ನ್ಯಾಯಸ್ಥಾನದ ತೀರ್ಪು ಬೇರೆ ಬಗೆಯಾಗಿದ್ದರೆ ಆಗ ಬೇರೆಯೆ ಪರಿಸ್ಥಿತಿಯುಂಟಾಗುವದು. ನನ್ನನ್ನು ಕೇಳಿದರೆ, ಘಟನಾ ಸಮಿತಿಯಿಂದ ಬಹಳ ಸಾಧಿಸಬಹುದು. ಆದರೆ ಬ್ರಿಟಿಶರು ತಮ್ಮ ಪಾತ್ರವನ್ನು ಸರಿಯಾಗಿ ಆಡಿ ತೋರಿಸಬೇಕು."

## ಸವಿನಯ ಶಾಸನಭಂಗ

"ಅವರು ಹಾಗೆ ಮಾಡುವರೆಂದು ನೀವನ್ನುತ್ತೀರಿ ನಾನೂ ನಂಬುವೆ." ಎಂದರು ಫಿಶರ್. "ಆದರೆ ಒಂದು ವೇಳೆ ಅವರು ತಮ್ಮ ಪಾತ್ರವನ್ನು ಸರಿಯಾಗಿ ಆಡದಿದ್ದರೆ, ಆಗ ನಿಮ್ಮದೇ ಮಾದರಿಯ ನಿಷೇಧವನ್ನು ನೀವು ವ್ಯಕ್ತಗೊಳಿಸುವದಿಲ್ಲವೆ?"

"ಪರಿಸ್ಥಿತಿ ಅನುಕೂಲವಾಗುವ ವರೆಗೆ ಹಾಗೆ ಮಾಡಲಾರೆ. ಆದರೆ ಭವಿಷ್ಯತ್ತಿನ ಬಗೆಗೆ ಊಹಾಪೋಹ ನಡೆಸುವದು ತಪ್ಪು. ಅಪಯಶಸ್ಸು ಬಂದೀತೆಂದು ಶಂಕಿಸುವದಂತೂ ಇನ್ನಷ್ಟು ತಪ್ಪು. ವರ್ತಮಾನದ ಬಗ್ಗೆ ನಾವು ಜಾಗರೂಕರಾಗಿದ್ದರೆ ಭವಿಷ್ಯತ್ತು ತನ್ನ ಜಾಗ್ರತೆ ತಾನೇ ನೋಡಿಕೊಳ್ಳುವದು."

## ಅಸ್ಪೃಶ್ಯತೆ ಮತ್ತು ಜಾತೀಯ ಸಮಸ್ಯೆ

ಆ ಮೇಲೆ ಅವರು ಹಿಂದೂ-ಮುಸ್ಲಿಂ ಐಕ್ಯದ ಕಡೆಗೆ ಸಾಗಿದರು. ಹಿಂದೂ-ಮುಸ್ಲಿಂ ಪ್ರಶ್ನೆಯನ್ನು ಒಡೆದು ನೋಡಿದರೆ ಕಟ್ಟಕಡೆಗೆ ಅದು ಅಸ್ಪೃಶ್ಯತೆಯ ಪ್ರಶ್ನೆಯ ಒಂದು ಟಿಸಿಲೆಂದು ಕಾಣಬರುವದು, ಎಂಬದಾಗಿ ಹೇಳಿ ಗಾಂಧೀಜಿಯವರು ಆಗಂತುಕನನ್ನು ಬೆಚ್ಚಿಸಿದರು. "ಹಿಂದೂ ಧರ್ಮವನ್ನು ಪೂರ್ಣವಾಗಿ ಶುದ್ಧೀಕರಿಸಿ ಅದರಲ್ಲಿ ಅಸ್ಪೃಶ್ಯತೆಯ ಕುರುಹು ಕೂಡ ಉಳಿಯದಂತೆ ಮಾಡಿದ ದಿನ ಜಾತೀಯ ಪ್ರಶ್ನೆಯೇ ಉಳಿದಿರುವದಿಲ್ಲ."

"ಚುನಾವಣೆಗಳಲ್ಲಿ ಕಾಂಗ್ರೆಸ್ ಹರಿಜನರು ಕಾಂಗ್ರೆಸ್ಸೇತರ ಹರಿಜನರನ್ನು ಸೋಲಿಸಿದ್ದರೂ ಹಿಂದೂ ಮತಗಳ ಬಲದಿಂದಲೇ ಅವರು ಹಾಗೆ ಮಾಡಲು ಸಮರ್ಥರಾದರೆಂದು ನಾನು ಕೇಳಿದ್ದೇನೆ."

"ಪ್ರಾಥಮಿಕ ಚುನಾವಣೆಗಳಲ್ಲಿ ಯಶಸ್ವಿಗಳಾದವರಲ್ಲಿ ತಮಗೆ ಸರಿದೋರುವವರನ್ನು ಆರಿಸುವ ಅವಕಾಶವನ್ನು ಸವರ್ಣ ಹಿಂದೂಗಳಿಗೆ ಕೊಡುವಗೋಸ್ಕರವಲ್ಲದಿದ್ದರೆ ಸಂಯುಕ್ತ ಚುನಾವಣೆಗಳು ಇರುವದಾದರೂ ಏಕೆ?" ಎಂದು ಗಾಂಧೀಜಿ ಕೇಳಿದರು. "ಪ್ರಾಥಮಿಕ ಚುನಾವಣೆಗಳಲ್ಲಿ ಸೋತವರಾರಿಗೂ ಸಂಯುಕ್ತ ಚುನಾವಣೆಗಳಲ್ಲಿ ಹುರಿಯಾಳಾಗಲು ಸಾಧ್ಯವಿಲ್ಲ. ಇದಲ್ಲದೆ, ಕೆಲವರು ಸಾಧಿಸುತಿರುವಂತೆ, ಬಹ್ವಂಶ ಸಂದರ್ಭಗಳಲ್ಲಿ ಕಾಂಗ್ರೆಸ್ ಹರಿಜನರು ಕಾಂಗ್ರೆಸ್ಸೇತರ ಹರಿಜನರನ್ನು ಸವರ್ಣ ಹಿಂದೂ ಮತಗಳ ಬಲದಿಂದಲೇ ಸೋಲಿಸಿದರೆಂಬದು ಸರಿಯಲ್ಲ. ಮದ್ರಾಸಿನಲ್ಲಿ ಕಾಂಗ್ರೆಸ್ಸೇತರ ಹರಿಜನರು ಪ್ರಾಥಮಿಕ ಚುನಾವಣೆಗಳಲ್ಲಿ ಸ್ಪರ್ಧಿಸಿದಲ್ಲೆಲ್ಲ ಅವರು ಹೆಚ್ಚುಕಡಿಮೆ ನೂರಕ್ಕೆ ನೂರೂ ಕಡೆ ಸೋತಿದ್ದಾರೆ. ಹಲವೆಡೆಗಳಲ್ಲಿ ಕಾಂಗ್ರೆಸ್ ಹರಿಜನರು ಪ್ರತಿಸ್ಪರ್ಧೆಯಿಲ್ಲದೆಯೆ ಆರಿಸಲ್ಪಟ್ಟಿದ್ದಾರೆ."

"ಅವರಲ್ಲಿ ಕೆಲವರು ಪ್ರತ್ಯೇಕ ಚುನಾವಣೆ ಬೇಕೆಂದು ಅಪೇಕ್ಷಿಸುತ್ತಾರೆ."

"ಹೌದು. ಆದರೆ ನಾವದನ್ನು ಪ್ರತಿರೋಧಿಸುತ್ತ ಬಂದಿದ್ದೇವೆ. ಪ್ರತ್ಯೇಕ ಮತದಾರ ಸಂಘಗಳನ್ನು ಕೊಟ್ಟರೆ ಅವರು ಹಿಂದೂ ಧರ್ಮದ ಆವಾರದಿಂದ ಹೊರಗೆ ಬಿದ್ದುಬಿಡುವರು. ಆ ಮೂಲಕ ಈ ದುಷ್ಟ ಬಹಿಷ್ಕಾರ ಶಾಶ್ವತವಾಗಿಬಿಡುವದು."

"ಅದು ನಿಜ. ಆದರೆ ಹಿಂದೂಗಳೇ ಹೇಗೂ ತಮ್ಮನ್ನು ಆವಾರದಿಂದ ಹೊರಗೆ ಹಾಕಿದ್ದರೆಂದು ಅವರು ಉತ್ತರವೀಯಬಹುದು."

"ಆದರೆ ಇಂದು ಅವರು ಪಶ್ಚಾತ್ತಾಪ ಪಡುತಿದ್ದಾರೆ."

"ಅವರಿಗೆ ಸಾಕಷ್ಟು ಪಶ್ಚಾತ್ತಾಪವಾಗಿದೆಯೆ ?"

"ಇನ್ನೂ ಇಲ್ಲ. ಇದನ್ನು ಹೇಳಲು ನನಗೆ ವಿಷಾದವಾಗುತ್ತದೆ. ಸಾಕಷ್ಟು ಪಶ್ಚಾತ್ತಾಪವಾಗಿದ್ದರೆ ಇಂದು ಅಸ್ಪೃಶ್ಯತೆಯೂ ಇರುತಿದ್ದಿಲ್ಲ. ನಾನು ಮೊದಲೇ ಹೇಳಿದಂತೆ ಜಾತೀಯ ಸಮಸ್ಯೆಯೂ ಇರುತಿದ್ದಿಲ್ಲ."

"ಹಿಂದೂ—ಮುಸ್ಲಿಮರೊಳಗೆ ಸಾಮಾಜಿಕ ಸಂಪರ್ಕ ಇರುವದು ಕಡಿಮೆಯೆ ?" ಫಿಶರರು ಆ ಮೇಲೆ ಕೇಳಿದರು.

"ಇಲ್ಲ, ವಸ್ತುಸ್ಥಿತಿ ತದ್ವಿಪರೀತವಾಗಿದೆ. ಆದರೆ ರಾಜಕೀಯ ದೃಷ್ಟಿಯಲ್ಲಿ ಮಾತ್ರ ಇಬ್ಬರ ನಡುವೆ ಅಡ್ಡಗೋಡೆಯಿದೆ— ಲಾರ್ಡ ಮಿಂಟೋರ ಉಪಕಾರದ ಫಲವಾಗಿ."

## ಪ್ರತೀಕಾರದ ತತ್ವಜ್ಞಾನ

ಸ್ವಲ್ಪ ವಾಗ್ವಾದದ ನಂತರ ಫಿಶರರು ಇನ್ನೊಂದು ವಿಷಯಕ್ಕೆ ಸರಿದರು.

"ನಿಮ್ಮ ಯುವಕರು ತೀರ ಭಾರತಾಂಧರಾಗಿಬಿಟ್ಟಿದ್ದಾರೆ."

"ಅದು ಸ್ವಲ್ಪ ಮಟ್ಟಿಗೆ ಮಾತ್ರ ಸತ್ಯ. ನಾವು ಆಂತರ್ರಾಷ್ಟ್ರೀಯ ಮನೋವೃತ್ತಿಯವರಾಗಿ ಬಿಟ್ಟಿದ್ದೇವೆಂದು ಹೇಳಲಾರೆ" ಗಾಂಧೀಜಿ ಮಾರುತ್ತರವಿತ್ತರು. "ಆದರೆ ಎಲ್ಲರೂ ಕಡೆಗಣಿಸಿ ಬಿಟ್ಟ ಧ್ಯೇಯಗಳನ್ನು —ಶೋಷಣೆಗೆ ಗುರಿಯಾದ ರಾಷ್ಟ್ರಗಳ ಪಕ್ಷವನ್ನು— ನಾವು ವಹಿಸಿಕೊಂಡಿದ್ದೇವೆ. ಏಕೆಂದರೆ ನಾವೇ ಪ್ರಮುಖ ಶೋಷಿತ ರಾಷ್ಟ್ರವಾಗಿದ್ದೇವೆ."

"ಇಲ್ಲಿ ಬಿಳಿಯರ ವಿರುದ್ಧ ದ್ವೇಷ ಭಾವನೆ ಬೆಳೆಯುತಿರುವದು ಹಿತಕರವಲ್ಲ," ಗಾಂಧೀಜಿಯ ಸಂದರ್ಶಕನು ಮುಂದುವರಿಸಿದನು. "ತಾಜಮಹಾಲ ಹಾಟೆಲಿನಲ್ಲಿ 'ಇಲ್ಲಿ ದಕ್ಷಿಣ ಆಫ್ರಿಕನ್ನರಿಗೆ ಪ್ರವೇಶವಿಲ್ಲ' ಎಂದು ಹಲಿಗೆ ಹಚ್ಚಿದ್ದಾರೆ. ಇದು ನನಗೆ ಸೇರುವದಿಲ್ಲ. ನಿಮ್ಮ ಅಹಿಂಸೆ ನಿಮ್ಮನ್ನು ಇದಕ್ಕಿಂತ ಹೆಚ್ಚು ಉದಾರರಾಗಿ ಮಾಡಬೇಕಾಗಿದೆ."

"ಅದು ಅಹಿಂಸೆಯಾಗಲಾರದು. ಇಂದು ಹಿಂದುಸ್ತಾನವನ್ನು ಬಿಳಿಯನೇ ಆಳುತ್ತಾನೆ. ಆದುದರಿಂದ ತಾಜಮಹಾಲು ಅಂಥ ಹಲಿಗೆ ಹಚ್ಚುವಷ್ಟು ದಿಟ್ಟತನ ತೋರಿಸಿದ್ದರೆ ಖಂಡಿತವಾಗಿಯೂ ಆ ಮಾತು ಅದಕ್ಕೆ ಭೂಷಣಪ್ರಾಯವಾದುದು."

-೧೦ನೇ ಪುಟ ನೋಡಿರಿ





# ದಕ್ಷಿಣ ಸಂಸ್ಥಾನಿಕರ ಪರಿಷತ್ತು

"ದಕ್ಷಿಣ ಸಂಸ್ಥಾನಗಳ ಒಕ್ಕೂಟದ ಬಗ್ಗೆ ಅಲ್ಲಿಯ ನರೇಂದ್ರರು ಇತ್ತೀಚೆಗೆ ಬಹಳ ವಿಚಾರವಿನಿಮಯ ನಡೆಸಿದ್ದಾರೆ. ಔಂಧದ ರಾಜೇಸಾಹೇಬರು, ಅಪ್ಪಾಸಾಹೇಬ, ಶಂಕರರಾವ ದೇವ ಹಾಗೂ ಬೇರೆ ಕೆಲವರು ಪಂಚಗಣಿಯಲ್ಲಿ ಗಾಂಧಿಜಿಯವರನ್ನು ಭೆಟ್ಟಿಯಾಗಿ ದಕ್ಷಿಣ ಸಂಸ್ಥಾನಗಳ ನರೇಂದ್ರರೊಡನೆ ಈ ವಿಷಯದ ಬಗ್ಗೆ ವಿಚಾರವಿನಿಮಯ ಮಾಡಬೇಕೆಂದು ಬಿನ್ನವಿಸಿದರು. ಅದರಂತೆ ಮೊನ್ನೆ ರವಿವಾರ ಪುಣೆಯ ಭಾರತ ಸೇವಕ ಸಮಾಜದ ಕಟ್ಟಡದಲ್ಲಿ ಭೆಟ್ಟಿ ನಡೆಯಿತು. ಔಂಧ ಫಲ್ಟನ, ಭೋರ, ಮಿರಜ (ಹಿರಿ), ಜಮಖಂಡಿ, ಕುರುಂದವಾಡ (ಹಿರಿ) ಈ ಸಂಸ್ಥಾನಗಳ ಮಹಾರಾಜರು ಆಗಮಿಸಿದ್ದರು. ಔಂಧದ ಅಪ್ಪಾಸಾಹೇಬ ಪಂತ ಶ್ರೀ ಸಾತವಳೆಕರ ಹಾಗೂ ಸಾಂಗಲಿಯ ಶ್ರೀಗಳಾದ ಕೋರೆ, ಸಾಠೆ ಮತ್ತು ಥೋಪ್ಟೆ ಭೋರದ ದಿವಾಣಸಾಹೇಬ, ಬುಧಗಾವ ಹಾಗೂ ರಾಮದುರ್ಗದ ಪ್ರತಿನಿಧಿಗಳು, ತಾತ್ಯಾಸಾಹೇಬ ಕೇಳಕರ ಮತ್ತು ಶ್ರೀ ಶಂಕರರಾವ ದೇವ ಇವರೂ ಅವರ ಜೊತೆಯಲ್ಲಿದ್ದರು. ಅವರನ್ನು ಉದ್ದೇಶಿಸಿ ಕೆಲವು ಮಾತುಗಳನ್ನು ಹೇಳಬೇಕೆಂದು ವಿನಂತಿ ಮಾಡಿಕೊಂಡ ಮೇರೆಗೆ ಗಾಂಧಿಜೀಯವರು ಭಾಷಣಮಾಡುತ್ತ ಹೀಗೆ ನುಡಿದರು.

"ಫಲ್ಟಣದ ರಾಜೇಸಾಹೇಬರು ಈ ವಿಷಯದಲ್ಲಿ ಸಿದ್ಧಪಡಿಸಿದ ಟಿಪ್ಪಣೆಗಳನ್ನು ಓದಿರುವೆ. ಅವುಗಳ ಬಗ್ಗೆ ನಾನೀಗ ಮಾತಾಡಬಯಸುವದಿಲ್ಲ. ಬ್ರಿಟಿಶರಿಂದಲೇ ತಮ್ಮ ರಕ್ಷಣೆ ಸಾಧ್ಯವೆಂದು ತಿಳಿದಿದ್ದ ನರೇಂದ್ರರು ಈಗ ಅಖಿಲ ಭಾರತದ ದೃಷ್ಟಿಯಿಂದ ವಿಚಾರ ನಡೆಸಿರುವದು ಶುಭ ಚಿಹ್ನವಾಗಿದೆ. ಬ್ರಿಟಿಶ ಸರಕಾರವು ಇಲ್ಲಿಂದ ತೊಲಗಿದರೆ ತಾವು ಸುರಕ್ಷಿತ ಉಳಿಯುವದಿಲ್ಲೆಂಬ ಭಾವನೆ ಕೆಲವು ವರ್ಷಗಳಹಿಂದೆ ನರೇಂದ್ರರಲ್ಲಿತ್ತು. ಆದರೆ ಆ ಭಾವನೆ ತಪ್ಪಾದುದೆಂದು ಈಗ ಅವರಿಗೆನಿಸಿದೆ. ಇದು ಆಶ್ಚರ್ಯವೇನೂ ಅಲ್ಲ. ಯಾಕಂದರೆ ಅವರೂ ಭಾರತಮಾತೆಯ ಪುತ್ರರು. ಸಂಸ್ಥಾನ ಪ್ರಜರು ಬ್ರಿಟಿಶರ ಗುಲಾಮರಾದ ನರೇಂದ್ರರ ಗುಲಾಮರೆಂದು ನಾನೂ ಒಂದು ಸಲ ನುಡಿದಿದ್ದೆ. ಯಾಕಂದರೆ ಅವರ ಮೇಲೆ ಬ್ರಿಟಿಶ ಸರಕಾರದ ಕೃಪೆ ಇರುವವರೆಗೆ ತಮ್ಮ ಸಂಸ್ಥಾನಗಳನ್ನು ಆಳಬಲ್ಲವರಾಗಿದ್ದರು. ಅವರ ಉಳಿವು ಅಥವಾ ಅಳಿವು ಬ್ರಿಟಿಶ್ ಸಾರ್ವಭೌಮರನ್ನವಲಂಬಿಸಿತ್ತು. ಈ ಸಂಗತಿಯನ್ನರಿತ ನರೇಂದ್ರರು ಸಹ ಹಿಂದೀ ಜನತೆಯೊಡನೆ ಸ್ವಾತಂತ್ರ್ಯವನ್ನಪೇಕ್ಷಿಸುತಿದ್ದರು. ಈ ಭಾವನೆ ಪ್ರತಿಯೊಬ್ಬನಲ್ಲಿದ್ದರೆ ಒಕ್ಕೂಟ ಅವಶ್ಯ. ಆದರೆ ಅದಕ್ಕಿಂತ ಮೊದಲು ನರೇಂದ್ರರು ಪ್ರಜರೊಡನೆ ಒಂದಾಗುವದು ಅಗತ್ಯವಿದೆ. ಪ್ರಜರೇ ಅವರ ಶಕ್ತಿ. ನರೇಂದ್ರರು ಪ್ರಜರ ಧರ್ಮದರ್ಶಿಗಳು ಮಾತ್ರ. ಪ್ರಜರ ಶಕ್ತಿಯನ್ನವಲಂಬಿಸುವಲ್ಲಿ ಗೌರವವಿದೆ. ಪ್ರಜರ ಹೊರ್ತು ಇನ್ನುಳಿದವರ ವರಿಷ್ಠಾಧಿಕಾರ ತಮ್ಮ ಮೇಲೆ ಅಧಿಕಾರ ನಡೆಸುವದು ಬೇಡೆಂದು ನರೇಂದ್ರರು ಎಂದು ಹೇಳುವ ಧೈರ್ಯ ಮಾಡುವರೊ, ಅಂದು ಭಾರತದ ಮತ್ತು ಭಾರತೀಯರ ಸುದಿನವೆಂದು ನಾನು ಭಾವಿಸುತ್ತೇನೆ. ಅವರು ಇಂಥ ಧೋರಣೆಯನ್ನನುಸರಿಸಿದರೆ ಕಾಂಗ್ರೆಸ ಅಥವಾ ಬೇರೆ ಯಾವದೇ ಸಂಸ್ಥೆಯೊಡನೆ ಒಪ್ಪಂದ ಮಾಡಿಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಈಗ ಅವರು ತಮ್ಮ ಪ್ರಜರೊಡನೆ ತಿಳುವಳಿಕೆ ಮಾಡಿಕೊಳ್ಳಬೇಕು.

ಪ್ರಜರು ಅರಸನ ಒಡೆಯರು. ಪ್ರಜರಿಂದಲೇ ಅರಸನಿಗೆ ಬಲವುಂಟಾಗುವದೆಂದು ತುಳಸಿ ರಾಮಾಯಣದಲ್ಲಿ ಹೇಳಿದ ಮಾತನ್ನು ನನ್ನ ತಂದೆ ನನಗೆ ತಿಳಿಸಿ ಕೊಟ್ಟಿದ್ದಾರೆ. ಪ್ರಜರ ಕರಾರುಗಳಂತೆ, ಅವರ ಒಲವಿನಂತೆ ರಾಜರು ಅವರ ಸೇವೆ ಮಾಡಬೇಕು. ಇದು ಕೆಲವರಿಗೆ ವಿಷಗುಳಿಗೆಯೆನಿಸಬಹುದು. ಆದರೆ ಅರಸರ ಇರವು ಇದೇ ಮಾರ್ಗವನ್ನವಲಂಬಿಸಿದೆ. ನರೇಂದ್ರರು ಈ ಧೋರಣೆಯನ್ನೊಪ್ಪಿದರೆ ಹಿಂದುಸ್ತಾನದ ಪ್ರಗತಿಯ ಇತಿಹಾಸದಲ್ಲಿ ಹೊಸ ಪ್ರಕರಣ ಪ್ರಾರಂಭವಾಗುವದು.

ಇದೇ ಧೋರಣ ನನಗೆ ಸರಿಯೆನಿಸಿದೆ. ಹೀಗೆ ಅಭಿಪ್ರಾಯ ಪಡುವವರು ನಾನೊಬ್ಬನೇ ಇದ್ದರೂ ಹಿಂಜರಿಯುವದಿಲ್ಲ. ಪ್ರಜರ ಸೇವಕರು ಅಥವಾ ಧರ್ಮದರ್ಶಿಗಳೆನಿಸಿಕೊಳ್ಳುವಲ್ಲಿ ರಾಜರಿಗೆ ಗೌರವವಿದೆ. ರಾಜಪ್ರಜರಲ್ಲಿ ಈ ತರದ ಬಾಂಧವ್ಯವುಂಟಾದ ನಂತರ ಮಾತ್ರ ಒಕ್ಕೂಟದ ಯೋಜನೆ ಮಾಡಬಹುದು. ನೀವು ಈಗ ಸಿದ್ಧಪಡಿಸಿದ ಯೋಜನೆಗಿಂತ ಅದು ಭಿನ್ನವಾಗುತ್ತದೆ.

ಈ ಒಕ್ಕೂಟದ ಯೋಜನೆ ಬ್ರಿಟಿಶರಿಂದ ಅಂದರೆ ಅವರ ಪೊಲಿಟಿಕಲ್ ಏಜಂಟರಿಂದ ಉದ್ಭೂತವಾಗಿದೆಂದು ನನಗೆ ಸಂಶಯ ಬರುತ್ತದೆ. ಅವರನ್ನು ದೂಷಿಸಿ ಫಲವಿಲ್ಲ. ಯಾಕಂದರೆ ಇದಕ್ಕಿಂತ ಹಿರಿದಾದ ಮಾರ್ಗ ಅವರಿಗೆ ಗೊತ್ತಿರುವದಿಲ್ಲ. ಬ್ರಿಟಿಶರು ಹಿಂದುಸ್ತಾನದಲ್ಲುಳಿಯದಿದ್ದರೆ ನರೇಂದ್ರರು ತಂತಮ್ಮೊಳಗೆ ಕಚ್ಚಾಡುವರೆಂದು ಅವರು ಭಾವಿಸಿದ್ದರು. ಅದಕ್ಕೆ ಆಧಾರವಿಲ್ಲ ಅವರು ಇಲ್ಲಿಂದ ಹೊರಡುವ ಮೊದಲು—ಕೆಲವು ತಿಂಗಳಗಳಲ್ಲಿ ಹೊರಡಲೇ ಬೇಕಾಗುವದು—ನರೇಂದ್ರರನ್ನು ಸಂಘಟಿಸಿ ಹೋಗುವದುಚಿತವೆಂದು ಅವರು ನಂಬಿದ್ದಾರೆ.

ಹಿಂದುಸ್ತಾನವು ಬ್ರಿಟಿಶ ಸತ್ತೆಯಿಂದ ಮುಕ್ತವಾಗಿ ನಿಜವಾದ ಸ್ವಾತಂತ್ರ್ಯ ಅನುಭವಿಸಬೇಕಾದರೆ ಅದರ ಪ್ರಗತಿ ತಳಹದಿಯಿಂದ ಪ್ರಾರಂಭವಾಗಬೇಕಲ್ಲದೆ ಮೇಲಿನಿಂದ ಇಳಿದು ಬರಬೇಕಾಗಿಲ್ಲ. ಇಲ್ಲದಿದ್ದರೆ ಒಡೆಯರ ಬದಲಾವಣೆಯಾದಂತಾಗುವದು. ಬ್ರಿಟಿಶರ ಸ್ಥಳದಲ್ಲಿ ಇನ್ನೊಬ್ಬರು ಬರಬಹುದು. ಅಂಥ ಪ್ರಸಂಗ ಬರುವದೆಂದು ನನಗನಿಸುವದಿಲ್ಲ. ಹಿಂದುಸ್ತಾನವು ಆತ್ಮಶಕ್ತಿಯ ಮೂಲಕ ಪ್ರತಿಭಾಸಂಪನ್ನ ರಾಷ್ಟ್ರವಾಗಲೆಂದು ನನ್ನ ಹಾರೈಕೆ. ಈ ಧ್ಯೇಯ ಸಾಧನೆಗೆ ನರೇಂದ್ರರು ನೆರವಾಗಬೇಕು.

ದಕ್ಷಿಣ ಸಂಸ್ಥಾನಿಕರು ಪಾಠ ಹಾಕಿಕೊಟ್ಟರೆ ಉಳಿದವರೂ ಹಿಂಬಾಲಿಸುವರು. ಆದುದರಿಂದ ನೀವು ಸೂಚಿಸಿದ ಒಕ್ಕೂಟ ಅವಶ್ಯವಿಲ್ಲ. ಒಂದು ವೇಳೆ, ಪ್ರಜರಿಗೆ ಹೊಣೆಗಾರಿಕೆ ಕೊಡುವದಾಗಿ ವೇಳೆ ಸವಿನುಡಿಗಳನ್ನಾಡಿ ಒಳಗೆ ಅದನ್ನು ಮುರಿಯುವ ಉದ್ದೇಶವಿದ್ದರೆ ಇದು ಯುರೋಪಿಯನ್ ರಾಷ್ಟ್ರಗಳಂತೆ ಮಿಲಿಟರಿ ಒಕ್ಕೂಟವಾಗುವದು. ಇದನ್ನು ಪ್ರಜರ ವಿರುದ್ಧ ಉಪಯೋಗಿಸಬಹುದಾಗಿದೆ.

ಸಂಸ್ಥಾನಗಳಿಗೆ ಅನ್ವಯಿಸುವದು ಇಡೀ ಹಿಂದುಸ್ತಾನಕ್ಕೂ ಅನ್ವಯಿಸುತ್ತದೆ. ಹಿಂದುಸ್ತಾನವು ಪ್ರಥಮ ವರ್ಗದ ಮಿಲಿಟರಿ ರಾಷ್ಟ್ರವಾಗಬೇಕಾದರೆ ಪಾಶ್ಚಿಮಾತ್ಯ ರಾಷ್ಟ್ರಗಳಿಂದ ಪುನಃ ಪಾಠ ಕಲಿಯಬೇಕು. ಅಂಥ ಪ್ರಸಂಗದಲ್ಲಿ ಕಾಂಗ್ರೆಸು ಕಳೆದ ಕಾಲು ಶತಮಾನದಿಂದ ಬೋಧಿಸುತ್ತ ಬಂದ ಅಹಿಂಸೆಯು ನಿರರ್ಥಕವಾಗುತ್ತದೆ. ಇದನ್ನು ನಾನು ಬಯಸುವದಿಲ್ಲ.

ಸ್ವತಂತ್ರ ಹಿಂದುಸ್ತಾನದ ರಚನೆಯಲ್ಲಿ ನರೇಂದ್ರರು ಯೋಗ್ಯ ಪಾತ್ರವಹಿಸಬೇಕೆಂದರೆ, ಔಂಧ ರಾಜ್ಯಘಟನೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡು ಎಲ್ಲರೂ ಉಪಯೋಗಿಸಬಹುದೆಂದು ನಾನು ಸೂಚಿಸಿದ್ದೇನೆ. ಪ್ರಜರಿಗಾಗಿ ಆ ಘಟನೆಯನ್ನು ಸೂಚಿಸಲಾಗಿದೆ. ರಾಜರ ಖಾಸಗಿ ವೆಚ್ಚದ ಮೇಲೆ ಸಹ ಪ್ರಜರ ನಿಯಂತ್ರಣವಿರಬೇಕೆಂದು ನನಗನಿಸುತ್ತದೆ. ಆದರೆ ಅದು ತಾನಾಗಿಯೇ ರೂಢಿಯಲ್ಲಿಬರಬೇಕು. ಒತ್ತಾಯದಿಂದ ಹೇರುವದು ಸಾಧ್ಯವಿಲ್ಲ. ಔಂಧದ ಆಡಳಿತ ಪ್ರಗತಿಹೊಂದಿದೆಯೆನ್ನಲಡ್ಡಿಯಿಲ್ಲ, ಔಂಧ ರಾಜೇಸಾಹೇಬರ ಅಥವಾ ಅಪ್ಪಾಸಾಹೇಬರ ಇಲ್ಲವೆ ನನ್ನ ಮನಸ್ಸಿಗೆ ತಕ್ಕಂತೆ ಪ್ರಗತಿಯಾಗಿರದಿದ್ದರೂ ಸಾಮಾನ್ಯವಾಗಿ ಪ್ರಗತಿ ಹೊಂದಿರುತ್ತದೆ.

## ಪ್ರಶ್ನೋತ್ತರ

ಗಾಂಧೀಜಿಯವರ ಭಾಷಣವಾದ ನಂತರ ಚರ್ಚೆ ಪ್ರಾರಂಭವಾಯಿತು. ಮತ್ತು ಕೆಲವರು ಪ್ರಶ್ನೆ ಕೇಳಿದರು.

"ನಾವು ಒಕ್ಕೂಟ ಸ್ಥಾಪಿಸಿಕೊಳ್ಳದಿದ್ದರೆ ಯಾವ ಸಂಸ್ಥಾನಕ್ಕೂ ಅಸ್ತಿತ್ವಶಕ್ತಿ ಉಳಿಯಲಾರದು. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು ?.... ಎಂದು ಓರ್ವರು ಪ್ರಶ್ನಿಸಿದರು.

"ನನ್ನ ಅಭಿಪ್ರಾಯವೇನಿದ್ದರೂ ನಿಮ್ಮ ಮಾತನ್ನು ಒಪ್ಪುತ್ತೇನೆ. ಆದರೆ ಪ್ರತಿಯೊಂದು ಹಳ್ಳಿಗೂ ಅಸ್ತಿತ್ವಶಕ್ತಿಯಿದೆ. ಅಂದಮೇಲೆ ಪ್ರಜರ ಅಂಗವಾದರೆ ನಿಮಗೂ ಅಸ್ತಿತ್ವ ಉಳಿಯುವದು. ಔಂಧವು ನಿಮ್ಮೆಲ್ಲರಲ್ಲಿ ಅತಿ ಚಿಕ್ಕದಾದರೂ ಅದಕ್ಕೆ ಎಲ್ಲವುಗಳಿಗಿಂತ ಹೆಚ್ಚು ಅಸ್ತಿತ್ವಶಕ್ತಿ ಇದೆ. ಆದರೆ ಎಲ್ಲವೂ ನಿಮ್ಮನ್ನವಲಂಬಿಸಿದೆ. ಪ್ರಜರು ಮಾತ್ರ ಹಿಂದೀಯರಲ್ಲಿ ಸಮರಸರಾಗಿರುವರು.

ಸ್ವಾತಂತ್ರ್ಯದ ಬಗ್ಗೆ ನನ್ನ ಅಭಿಪ್ರಾಯವೇನಿದೆಯೆಂಬದನ್ನು ಹರಿಜನದಲ್ಲಿ ಬರೆದ ಒಂದು ಲೇಖದಲ್ಲಿ ಚಿತ್ರಿಸಿದ್ದೇನೆ. ಆ ಚಿತ್ರದಲ್ಲಿ ಹಳ್ಳಿಯು ಮೂಲಘಟಕ ಹಿಂದುಸ್ತಾನದ ರಾಜ್ಯಘಟನೆಯನ್ನು ಹಳ್ಳಿಯ ಮೇಲೆ ರಚಿಸಿ ಅದರ ಮೇಲೆ ಭಾರ ಹಾಕತಕ್ಕದ್ದಲ್ಲ. ಆದರೆ ಹಳ್ಳಿಗೇ ಪೂರ್ಣ ಅಧಿಕಾರ ಕೊಟ್ಟು ಅದು ರಾಜಕೀಯ ಮತ್ತು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಯಾಗುವಂತೆ ನೋಡಿಕೊಳ್ಳಬೇಕು. ಇವತ್ತು ರಾಜ್ಯದಾಡಳಿತೆಯ ಸೂತ್ರಗಳು ಎವರೆಸ್ಟ ಪರ್ವತದ ತುದಿಯಲ್ಲಿನ್ನು ಅಲ್ಲಿಂದ ಆಜ್ಞೆಗಳು ಬರುತ್ತಿವೆ. ಮತ್ತು ಜನರು ಅವುಗಳನ್ನು ಪಿಟ್ಟೆನ್ನದೆ ಪಾಲಿಸುತ್ತಾರೆ. ಗೌಡ ಕುಲಕರ್ಣಿಯವರು ಪಟ್ಟಿ ವಸೂಲಿಮಾಡುವಾಗ ಮಾತ್ರ ರೈತರಿಗೆ ಬ್ರಿಟಿಶ್ ಸರಕಾರದ ದರ್ಶನವಾಗುತ್ತದೆ.

ನಮ್ಮ ಪ್ರಗತಿ ಹಳ್ಳಿಯ ಸುತ್ತಲೂ ಬೆಳೆಯಬೇಕಲ್ಲದೆ ಒಂದರಮೇಲೊಂದು ಜೀವಿಸಬಾರದು. ಯಾರೂ ಹೆಚ್ಚಲ್ಲ ಅಥವಾ ಕೀಳಲ್ಲ ಹಿಂದುಸ್ತಾನವು ಹಳ್ಳಿಯ ರಾಜ್ಯಗಳ ಸಂಯುಕ್ತ ರಾಜ್ಯವಾಗಬೇಕು. ಪ್ರಾಚೀನ ಕಾಲದಲ್ಲಿ ಇದೇ ಪದ್ಧತಿ ಇತ್ತು. ಆಗ ನಗರಗಳು ಹಳ್ಳಿಗಳಿಗೆ ಅಧೀನವಾಗಿದ್ದವು. ಅವು ಹಳ್ಳಿಯ ಉತ್ಪಾದನೆಗಳ ಪ್ರದರ್ಶನಗಳಾಗಿದ್ದವು. ಮುಂದೆ ಸಹ ಇದೇ ರೀತಿ ರಾಜ್ಯದಾಡಳಿತ ಸಾಗಬೇಕೆಂದು ನನ್ನ ಅಭಿಪ್ರಾಯವಿದೆ. ಹಳ್ಳಿಯ ಪದ್ಧತಿಯಲ್ಲಿ ಕೆಲವು ದೋಷಗಳಿರಬಹುದು. ಅವುಗಳನ್ನು ನಿವಾರಿಸಿದ ಹೊರ್ತು ಹಿಂದುಸ್ತಾನದಲ್ಲಿ ಹರಿಜನರಿಗೆ ಮತ್ತು ಜಾಗತಿಕ ಸಂಘದಲ್ಲಿ ಹಿಂದುಸ್ತಾನಕ್ಕೆ ಉಳಿಗಾಲವಿಲ್ಲದಾಗುವದು." ಎಂದು ಗಾಂಧೀಜಿಯವರು ಸ್ಪಷ್ಟೀಕರಿಸಿದರು.

ಹಾಗಾದರೆ ಪ್ರಜರು ತಮ್ಮ ರಾಜ್ಯಘಟನೆಯನ್ನು ರಚಿಸಿಕೊಳ್ಳುವಂತೆ ಅವರನ್ನೇ ಕೇಳೋಣ. ಅವರ ವಿಚಾರಕ್ಕಾಗಿಯೇ ನಾವೀ ಯೋಜನೆಯನ್ನು ಸಿದ್ಧಮಾಡಿದ್ದೇವೆ ಎಂದು ಇನ್ನೊಬ್ಬರು ಸೂಚಿಸಿದರು.

ಗಾಂಧೀಜಿಯವರು ಉತ್ತರ ಕೊಡುತ್ತ 'ನಿಮ್ಮದು ಎಷ್ಟೇ ಸದುದ್ದೇಶವಿದ್ದರೂ ಅದನ್ನು ನೀವು ಸಾಧಿಸಲಾರಿರಿ. ನೀವು ಬೆಳೆದ ವಾತಾವರಣವೇ ಬೇರೆ. ಆದುದರಿಂದ ನೀವು ಪಂ. ಜವಾಹರಲಾಲರನ್ನು ಕಾಣಬೇಕೆಂದು ಸೂಚಿಸುತ್ತೇನೆ. ಹಾಗಾದಲ್ಲಿ ಪ್ರಜರ ಅಭಿಪ್ರಾಯಕ್ಕೆ ಅವಕಾಶ ಕೊಟ್ಟಂತಾಗುವದು. ಪಂ. ಜವಾಹರಲಾಲರು ಸಂಸ್ಥಾನ ಪ್ರಜಾಪರಿಷತ್ತಿನ ಅಧ್ಯಕ್ಷರಾಗಿರುವದರಿಂದ ಈ ವಿಷಯದ ವಿಮರ್ಶೆಗೆ ಅವರೇ ಯೋಗ್ಯರು. ಅಲ್ಲದೆ ಸಂಸ್ಥಾನ ಪ್ರಜಾಪರಿಷತ್ತಿನ ಮುಂದೆ ನಿಮ್ಮ ಯೋಜನೆಯನ್ನಿಡುವದಕ್ಕೂ ನೀವು ಹೆದರಬಾರದು. ಪರಿಷತ್ತು ಕೊನೆಯ ನಿರ್ಣಯ ಮಾಡಲಿ. ಅದರ ಧೋರಣೆ ನಿಮಗೆ ವಿರುದ್ಧವಾಗಿಲ್ಲ ?

"ಮಾತೃಭೂಮಿಯ ಸೇವೆ ಮಾಡುವ ಇಚ್ಛೆ ನಮ್ಮಲ್ಲಿದೆ. ಆದರೆ ನಮ್ಮ ಸಂಸ್ಥಾನಗಳು ಬಹಳ ಚಿಕ್ಕವಿರುವದರಿಂದ ಒಂದುಗೂಡದ ಹೊರತು ಸಾಧ್ಯವಿಲ್ಲ"

"ಈ ಮಾತನ್ನು ನಾನು ಒಪ್ಪುವದಿಲ್ಲ. ಸ್ವತಂತ್ರ ಹಿಂದುಸ್ತಾನದ ನನ್ನ ಚಿತ್ರದಲ್ಲಿ ಇದಕ್ಕೆ ಅವಕಾಶವಿಲ್ಲ. ಅದರಲ್ಲಿ ಒಂದೊಂದು ಹಳ್ಳಿ ಒಂದೊಂದು ರಾಷ್ಟ್ರದಷ್ಟು ಬಲಿಷ್ಠವಿರುತ್ತದೆ. ನನ್ನ ಕಲ್ಪನೆಯ ಹಳ್ಳಿಯಲ್ಲಿ ೧೫೦೦ ಜನರಿದ್ದಾರೆಂದು ತಿಳಿಯೋಣ. ಸ್ವಾವಲಂಬನ ತತ್ವದನ್ವಯ ಅದನ್ನು ಸಂಘಟಿಸಿದರೆ ಅದರಿಂದ ಬೇಕಾದಷ್ಟು ಕೆಲಸವಾಗಬಲ್ಲದು. ಆದುದರಿಂದ ದೊಡ್ಡ ಒಕ್ಕೂಟ ಸ್ಥಾಪಿಸಿದ ಹೊರತು ಸೇವೆ ಗೈಯುವದು ಸಾಧ್ಯವಿಲ್ಲೆಂದು ಭಾವಿಸಬೇಡಿರಿ. ನರೇಂದ್ರರ ಮನದೊಲವು ಒಂದಾದರೆ ಮತ್ತು ಪ್ರಜರ ಹಿತಸಾಧನೆಗೆ ಅವರಲ್ಲಿ ಪ್ರಥಮ ಪ್ರಾಶಸ್ತ್ಯ ದೊರೆತರೆ ಅದು ನೀವೀಗ ಯೋಚಿಸಿದ ಒಕ್ಕೂಟಕ್ಕಿಂತ ಬಲಿಷ್ಠವಾದ ಒಕ್ಕೂಟವಾಗುವದು."

"ಸಂಸ್ಥಾನಗಳು ಮೊದಲು ಹಳ್ಳಿ ರಾಜ್ಯಪದ್ಧತಿಯನ್ವಯ ಸಂಘಟಿತವಾಗಿ ನಂತರ ಒಕ್ಕೂಟ ಸ್ಥಾಪಿಸಿಕೊಂಡರೆ ನಿಮ್ಮ ಅಭಿಪ್ರಾಯವೇನು ?"

"ಅದು ಅತ್ಯುತ್ತಮವಾಗುವದು. ಆದರೆ ನೀವು ಭಿನ್ನತರವಾದ ಭಾಷೆಯಲ್ಲಿ ಮಾತಾಡಿ ಭಿನ್ನ ಮಾರ್ಗದಿಂದ ಕೆಲಸ ಮಾಡಲು ಪ್ರಯತ್ನಿಸುವಿರಿ."

"ನಿಮ್ಮ ಚಿತ್ರದಂತೆ ರಾಜ್ಯ ಕಟ್ಟುವದಕ್ಕೆ ದೀರ್ಘಕಾಲ ಹಿಡಿಯುವದು. ಹೊರಗಿನ ಜನರು ಅದನ್ನು ರೂಢಿಯಲ್ಲಿ ತಂದ ಹೊರತು ಸಂಸ್ಥಾನ ಪ್ರಜರು ಒಪ್ಪಲಿಕ್ಕಿಲ್ಲ ?"

"ಸಂಸ್ಥಾನಿಕರು ತಮ್ಮ ಸಂಸ್ಥಾನಗಳಲ್ಲಿ ಯೋಗ್ಯ ಮಾರ್ಗ ಹಾಕಿಕೊಟ್ಟರೆ ಸ್ವತಂತ್ರ ಹಿಂದುಸ್ತಾನದ ರಚನೆಯಲ್ಲಿ ಅವರ ಸೇವೆ ಅತ್ಯಂತ ಮಹತ್ವದ್ದಾಗುವದೆಂದು ನಾನು ಮೊದಲು ಹೇಳಿದ್ದು ಇದಕ್ಕಾಗಿಯೇ. ಸಂಸ್ಥಾನಗಳು ಚಿಕ್ಕ ಘಟಕಗಳಿರುವದರಿಂದ ಪ್ರಯೋಗ ಮಾಡಲು ಅನುಕೂಲವಿರುತ್ತದೆ. ಆದರೆ ಬ್ರಿಟಿಶರ ಅನಿಷ್ಟ ಪದ್ಧತಿಗಳನ್ನು ಅನುಸರಿಸುವಲ್ಲಿ ಮಾತ್ರ ನರೇಂದ್ರರು -ಇದುವರೆಗೆ ಮುಂದಾಗಿರುವರು. ರೈತರಿಂದ ಹಣ ಕಿತ್ತುಕೊಳ್ಳುವ ಮಂತ್ರಿಗಳು ಹೇಳಿದಂತೆ ಕುಣಿಯುತ್ತಾರೆ. ನಿಮ್ಮ ಮಂತ್ರಿಗಳಿಂದ ಈ ಕೆಲಸವಾಗದು. ಆದುದರಿಂದ ಕೆಲಸ ಮಾಡಬೇಕೆಂಬ ಇಚ್ಛೆ ಇದ್ದರೆ ಪಂಡಿತ ಜವಾಹರಲಾಲರನ್ನು ನೀವು ಮುಖ್ಯ ಮಂತ್ರಿಯನ್ನಾಗಿ ಮಾಡಿಕೊಳ್ಳಿರಿ. ಅವರು ತಮ್ಮ ಯೋಜನೆಯನ್ನು ಸಿದ್ಧಪಡಿಸಲಿ. ಅವರು ಪ್ರಜರನ್ನು ವಿಚಾರಿಸಿಯೇ ವಿಚಾರಿಸುವರು."

"ಘಟನಾ ಸಮಿತಿಯ ಮಾರ್ಗ ನಿರೀಕ್ಷಿಸದೆ ನಮ್ಮ ಜನರಿಗೆ ಸ್ವರಾಜ್ಯ ದೊರೆಯಲೆಂಬ ಉದ್ದೇಶದಿಂದ ಒಕ್ಕೂಟ ಸ್ಥಾಪಿಸಿಕೊಳ್ಳಬೇಕೆನ್ನುತ್ತೇವೆ. ನಿಮ್ಮ ಅಭಿಪ್ರಾಯವೇನು ?"

"ಇದೇ ತಪ್ಪು ಮಾರ್ಗ. ಪ್ರಜರಹಿತಸಾಧನೆಯು ನಿಮ್ಮ ಉದ್ದೇಶವಿದ್ದರೆ ಈಗಲೇ ಅವರಿಗೆ ಪೂರ್ಣ ಸ್ವಾತಂತ್ರ್ಯ ಕೊಡಿರಿ. ಅಷ್ಟರೊಳಗೆ ಘಟನಾ ಸಮಿತಿಯ ಕೆಲಸವೂ ಪೂರೈಸುತ್ತದೆ. ಅದು ಸಂಸ್ಥಾನಗಳನ್ನೊಳಗೊಂಡು ಇಡೀ ಹಿಂದುಸ್ತಾನದ ರಾಜ್ಯಘಟನೆ ರಚಿಸುವದು. ಇಷ್ಟವೆನಿಸಿದರೆ ಸಂಸ್ಥಾನಗಳ ಒಕ್ಕೂಟಕ್ಕೂ ಅದರಲ್ಲಿ ಅವಕಾಶ ಕಲ್ಪಿಸಬಹುದು. ವ್ಯಕ್ತಿಯಿಂದ ನೀವು ಕಾರ್ಯವನ್ನಾರಂಭಿಸಿದರೆ ತಪ್ಪು ದಾರಿ ತುಳಿಯಲಾರಿರಿ.

"ಸಂಶಯದಿಂದ ಮಾತ್ರ ನೀವು ಈ ಒಕ್ಕೂಟವನ್ನು ವಿರೋಧಿಸುವಿರಾ ?" ತಾತ್ಯಾಸಾಹೇಬ ಕೇಳಕರರು ಪ್ರಶ್ನಿಸಿದರು.

"ಆದರಿಂದ ಪ್ರಾರಂಭಿಸಿದ್ದು ನಿಜ. ಆದರೆ ನನಗೆ ಸಂಶಯ ಬಂದ ಮಾತ್ರದಿಂದ ಅದನ್ನು ವಿರೋಧಿಸುವದಿಲ್ಲ. ನಿಮ್ಮ ಮೇಲೆ ನನ್ನ ಸಂಶಯವಿಲ್ಲ. ಆದರೆ ವಾತಾವರಣವೇ ಹಾಗಿದೆ. ನೀವು ಕೈಹಾಕಿದ ಕೆಲಸದಲ್ಲಿರುವ ಗಂಡಾಂತರದ ಅರಿವು ನಿಮಗಿಲ್ಲ. ಆದುದರಿಂದ ಸಾವಧಾನದಿಂದ ಮುಂದೆ ಸಾಗಿರಿ"

"ನಿಮ್ಮ ವಾದವು ಬ್ರಿಟಿಶ ಪ್ರಾಂತಗಳಲ್ಲಿಯ ತಾಲೂಕ ಮತ್ತು ಜಿಲ್ಲೆಗಳಿಗೂ ಅನ್ವಯಿಸುವದಿಲ್ಲವೇ ? ಅವುಗಳನ್ನು ವಿಸರ್ಜಿಸುವಂತೆ ನೀವು ಕೇಳುವದಿಲ್ಲವೇಕೆ ?"

"ಈಗಿದ್ದ ಸಂಸ್ಥೆಗಳನ್ನು ವಿಸರ್ಜಿಸಬೇಕೆಂದು ನಾನು ಹೇಳುವದಿಲ್ಲ. ನಾನು ಹೀಗೆಂದ ಮಾತ್ರಕ್ಕೆ ಬ್ರಿಟಿಶ ಆಡಳಿತೆ ನನ್ನ ಮನಸಿಗೆ ಬಂದಿದೆಯೆಂದು ತಿಳಿಯಬೇಡಿರಿ. ಪಟ್ಟಿ ವಸೂಲಿಗಾಗಿ ತಾಲೂಕ ಮತ್ತು ಜಿಲ್ಲೆಗಳು ನಿರ್ಮಿಸಲ್ಪಟ್ಟಿವೆ. ಅವನ್ನು ಬಹಳ ಕಷ್ಟದಿಂದ ನೀವು ಅನುಸರಿಸಬಹುದು. ಆದರೆ ಈಗ ನಾನು ಹೇಳುವದಿಷ್ಟೆ. ಒಕ್ಕೂಟದ ವಿಚಾರವನ್ನು ತಲೆಯಲ್ಲಿ ಹಾಕಿಕೊಳ್ಳಬೇಡಿರಿ. ಘಟನಾ ಸಮಿತಿಗೆ ಅದನ್ನು ಬಿಟ್ಟುಕೊಡಿರಿ. ಮಹಾಭಾರತದಲ್ಲಿ ಹೇಳಿದಂತೆ :

ಅನಾರಂಭೋ ಹಿ ಕಾರ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಂ

( ಹೊಸ ಸಾಹಸಗಳಲ್ಲಿ ಒಮ್ಮೆಲೇ ಮುಡುಕದಿರುವದು ಬುದ್ಧಿಯ ಮೊದಲನೆಯ ಲಕ್ಷಣ.)

ಪುಣೆ ೨೯—೭—೪೬ ಪ್ಯಾರೇಲಾಲ

## ಪ್ರಶ್ನ ಪೆಟ್ಟಿಗೆ

(೭ನೇ ಪುಟದಿಂದ ಬಂದುದು)

ಉತ್ತರ— ನನಗೆ ಗೊತ್ತಿದ್ದ ಆರೋಗ್ಯ ನಿಯಮಗಳನ್ನು ನಾನು ಪ್ರತಿಪಾದಿಸಿರುತ್ತೇನೆ. ಪ್ರತಿಯೊಬ್ಬರಿಗೂ ಒಂದೇ ಬಗೆಯ ಪಥ್ಯಾಹಾರ ಮತ್ತು ಮಿತಾಹಾರ ಒಗ್ಗದು. ಯೋಗ್ಯ ವಾಚನ ಮತ್ತು ವಿಚಾರಗಳಿಂದ ಆಯಾ ವ್ಯಕ್ತಿಯು ತನ್ನ ಆಹಾರವನ್ನು ಗೊತ್ತು ಪಡಿಸಿಕೊಳ್ಳಬೇಕು. ವ್ಯಕ್ತಿಯು ತಪ್ಪು ಮಾಡಲಾರನೆಂದು ಇದರರ್ಥವಾಗದು ಮತ್ತು ಅವನ ಇಲ್ಲವೆ ಅವಳ ಜ್ಞಾನವೂ ಪರಿಪೂರ್ಣವಾಗಿದೆಂದು ಇದರರ್ಥವಲ್ಲ. ಅಂತೆಯೆ ಜೀವನವು ಪ್ರಯೋಗಶಾಲೆಯೆಂದು ಕರೆಯಲಾಗುತ್ತದೆ. ಎರಡನೆಯವರ ಅನುಭವದಿಂದ ಪಾಠ ಕಲಿತು ವ್ಯಕ್ತಿಯು ಮುಂದಕ್ಕೆ ಹೆಜ್ಜೆ ಇಡಬೇಕು; ಅವನು ಯಶಸ್ವಿಯಾಗದಿದ್ದರೆ ಎರಡನೆಯವರನ್ನು ನಿಂದಿಸತಕ್ಕದ್ದಲ್ಲ. ಇಲ್ಲವೆ ತನ್ನನ್ನು ಕೂಡ ನಿಂದಿಸಿಕೊಳ್ಳತಕ್ಕದ್ದಲ್ಲ. ಆರೋಗ್ಯ ನಿಯಮದಲ್ಲಿಯ ದೋಷಗಳನ್ನು ಹುಡುಕಲು ಪ್ರವೃತ್ತರಾಗಬಾರದು. ಆದರೆ ವಿಚಾರಾನಂತರ ಯಾವದೊಂದು ನಿಯಮದಲ್ಲಿ ದೋಷ ಕಂಡು ಬಂದಲ್ಲಿ ಅವನು ಸರಿಯಾದ ನಿಯಮವನ್ನು ಹೇಳತಕ್ಕದ್ದು.

ನಿಮ್ಮ ಬಗ್ಗೆ ಹೇಳಬೇಕಾದರೆ ನಿಮ್ಮ ಅನಾರೋಗ್ಯಕ್ಕೆ ಹಲವಾರು ಕಾರಣಗಳಿರಬಹುದು. ನೀವು "ಪಂಚಭೂತ"ಗಳ ಉಪಯೋಗವನ್ನು ಯೋಗ್ಯ ರೀತಿಯಿಂದ ಮಾಡಿರುವಿರೋ ಇಲ್ಲವೋ ಎಂಬುದನ್ನು ಯಾರು ಹೇಳಬಲ್ಲರು ? ನನಗೆ ಗೊತ್ತಿದ್ದ ಸೃಷ್ಟಿನಿಯಮಗಳಲ್ಲಿ ನನಗೆ ವಿಶ್ವಾಸವಿರುವದರಿಂದ ನೀವು ಎಲ್ಲಿ ಯಾದರೂ ತಪ್ಪಿರುವಿರೆಂದು ಹೇಳಬೇಕಾಗುವದು. ಮಹಾದೇವ ಮತ್ತು ರಾಮಕೃಷ್ಣ ಪರಮಹಂಸರ ಬಗ್ಗೆಯೂ ಹೀಗೆಯೇ ಹೇಳಬಹುದು. ಸೃಷ್ಟಿನಿಯಮಗಳು ತಪ್ಪಿರುವವೆಂದು ಹೇಳುವದಕ್ಕಿಂತ ಅವರು ಎಲ್ಲಿ ಯಾದರೂ ತಪ್ಪು ಮಾಡಿರಲಿಕ್ಕೆಬೇಕೆಂಬುದು ಹೆಚ್ಚು ಸಯುಕ್ತಿಕವಾಗುವುದು. ಈ ನಿಯಮಗಳನ್ನೇನು ನಾನು ಮಾಡಿರುವದಿಲ್ಲ. ಅನುಭಾವಿಗಳ ಅನುಭವಗಳೇ ಆ ನಿಯಮಗಳು. ಅವುಗಳಲ್ಲಿ ನನಗೆ ವಿಶ್ವಾಸ. ಮತ್ತು ಆ ವಿಶ್ವಾಸದಂತೆ ನನ್ನ ಆಚರಣೆ. ಮನುಷ್ಯನು ಎಷ್ಟಾದರೂ ಅಪೂರ್ಣನು. ಸಂಪೂರ್ಣ ಸತ್ಯವು ಅವನಿಗೆ ಹೇಗೆ ತಿಳಿಯಬೇಕು? ಅಲೋಪಥಿಕ್ ಡಾಕ್ಟರರಿಗೆ ಅವುಗಳಲ್ಲಿ ವಿಶ್ವಾಸವಿಲ್ಲ. ಇಲ್ಲವೆ ವಿಶ್ವಾಸವಿದ್ದರೂ ಬೇರೆ ಅರ್ಥದಲ್ಲಿ ಅವರು ಹಾಗೆ ಮಾಡುವರು ಎಂದು ಮುಂತಾಗಿ. ಬೃರಿಂದ ನನ್ನ ಅಭಿಪ್ರಾಯಕ್ಕೇನೂ ವ್ಯತ್ಯಯ ಬರುವದಿಲ್ಲ. ನಾನು ಪಡುವ ಈ ಅಭಿಪ್ರಾಯದಿಂದ ಮೇಲೆ ಉಲ್ಲೇಖಿಸಿದ ಮಹನೀಯರ ಶ್ರೇಷ್ಠತೆಗೆ ಯಾವದೇ ಬಗೆಯ ಅಗೌರವ ಬರಲಾರದು, ಬರಕೂಡದು.

ಪ್ರಶ್ನೆ— ಹರಿಜನಬಂಧುವಿನ ೧೪—೪—೪೬ ನೆಯ ಸಂಚಿಕೆಯಲ್ಲಿ "ಪರಮಾತ್ಮನು ವಿಧಿ ಮತ್ತು ವಿಧಾತನು" ಎಂದು ಬರೆದಿರುವಿರಿ. ಇದರ ಅರ್ಥ ನನಗೆ ಹೊಳೆಯದು. ಮನುಷ್ಯರೆ ವಿಧಿಗಳ ಕರ್ತರು. ಮತ್ತು ಕಾಲಕಾಲಕ್ಕೆ ಅವುಗಳಲ್ಲಿ ಬದಲಾವಣೆಯಾಗುವವು. ಉದಾಹರಣಾರ್ಥವಾಗಿ ದ್ರೌಪದಿಗೆ ಐವರು ಗಂಡಂದಿರಿದ್ದರು. ಆದರೂ ಅವಳು ಸತಿ. ಇಂದು ಹಾಗೆ ಮಾಡುವ ಹೆಣ್ಣುಮಗಳು ಸೂಳೆಯೆನಿಸಿಕೊಳ್ಳುವಳು.

ಉತ್ತರ— ವಿಧಿ ಇದರ ಅರ್ಥ ಇಲ್ಲಿ ಪರಮಾತ್ಮನ ವಿಧಿ. ಮಾನವನು ತನ್ನ ತಿಳುವಳಿಕೆಗನುಸಾರವಾಗಿ ಆ ವಿಧಿಯ ಅರ್ಥಮಾಡಿಕೊಳ್ಳುವನು. ಉದಾಹರಣಾರ್ಥವಾಗಿ ಪೃಥ್ವಿ ತಿರುಗುತಿದೆಂಬುದು ಸೃಷ್ಟಿ ನಿಯಮ. ಇಂದು ಅದರ ಸತ್ಯತೆ ಸಿದ್ಧವಾಗಿದೆ. ಆದರೆ ಗ್ಯಾಲಿಲಿಯೋನಿಗಿಂತ ಹಿಂದಿನ ಜ್ಯೋತಿಷಿಗಳು ಭಿನ್ನವಾಗಿ ಭಾವಿಸಿಕೊಂಡಿದ್ದರು. ದ್ರೌಪದಿ ಬಗ್ಗೆ ಹೇಳಬೇಕಾದರೆ ಮಹಾಭಾರತ ಇತಿಹಾಸವಲ್ಲ. ಅದೊಂದು ದಂತಕಥೆಯೆಂದು ನನ್ನ ಅಭಿಪ್ರಾಯ. ದ್ರೌಪದಿಯೆಂದರೆ ಪಂಚೇಂದ್ರಿಯಗಳಿಗೆ ಅಧೀನವಾದ ಆತ್ಮ.

ಪ್ರಶ್ನೆ— ಪರಮಾತ್ಮ ಬುದ್ಧಿಗಮ್ಯನಲ್ಲ ಭಕ್ತಿಗಮ್ಯ.

ಪುನರ್ಜನ್ಮದಲ್ಲಿ ನಿಮಗೆ ವಿಶ್ವಾಸವಿದೆಯೇ ? ಇಲ್ಲವೆ ಪಾಪ ಪುಣ್ಯಗಳ ಮಹತ್ವವನ್ನು ಜನ ತಿಳಿದುಕೊಳ್ಳಬೇಕೆಂದೂ ಆ ವಿಶ್ವಾಸದಿಂದ ಕೆಲ ಮಟ್ಟಿಗೆ ಸಮಾಧಾನ ಹೊಂದಬೇಕೆಂದೂ ಹಿಂದೂ ದ್ರಷ್ಟಾರರು ಪುನರ್ಜನ್ಮದ ತತ್ವವನ್ನು ಪ್ರತಿಪಾದಿಸಿದರೋ ?

ಉತ್ತರ:— ಪರಮಾತ್ಮನು ಜ್ಞಾನಗಮ್ಯನಲ್ಲ. ಜ್ಞಾನ ಕೆಲಮಟ್ಟಿಗೆ ಮಾನವನನ್ನು ಮುಂದಕ್ಕೆ ಒಯ್ಯಬಹುದು. ಆದರೆ ಅದಕ್ಕೂ ಮುಂದೆ ಅವನು ಹೋಗಲಾರನು. ಅದು ವಿಶ್ವಾಸದ ಮತ್ತು ಅವಿಶ್ವಾಸದಿಂದ ಲಭ್ಯವಾದ ಅನುಭವದ ವಿಷಯ. ತನ್ನ ಸುಕೃತಾನುಭವದ ಮೇಲೆ ಯಾವನೊಬ್ಬನು ವಿಶ್ವಾಸವಿಡತಕ್ಕದ್ದು. ಇಲ್ಲವೆ ವೈಯಕ್ತಿಕ ಅನುಭವಕ್ಕಿಂತ ಕಡಮೆ ಯಾವದರಿಂದಲೂ ಸಮಾಧಾನ ಹೊಂದಬಾರದು. ಅತ್ಯಂತಿಕ ವಿಶ್ವಾಸವಿದ್ದರೆ ಅನುಭವದ ಕೊರತೆಯೆನಿಸಲಾರದು. ಪಾಪ ಪುಣ್ಯಗಳ ಭೇದವು ಸಮಾಧಾನಕ್ಕೆ ಕಾರಣವಾಗದು. ಅಲ್ಲದೆ ಪರಮಾತ್ಮನಲ್ಲಿರಬೇಕಾದ ವಿಶ್ವಾಸದ ಉದ್ದೇಶವೂ ಅದಲ್ಲ. ಪಾಪ ಪುಣ್ಯಗಳಿವೆ ಮತ್ತು ಪುನರ್ಜನ್ಮವಿದೆಂದು ದ್ರಷ್ಟಾರರ ಮತ. ಪುನರ್ಜನ್ಮದ ಈ ತತ್ವವು ಜ್ಞಾನಗಮ್ಯವಾಗಿದೆಂದು ನನಗನಿಸುತ್ತದೆ.

ಪಂಚಗಣಿ
೨೫-೭-೪೬

ಮೋ. ಕ. ಗಾಂಧಿ.

## ನಾಲ್ಕು ವರ್ಷಗಳ ನಂತರ

(೮ನೇ ಪುಟದಿಂದ ಬಂದುದು)

ಫಿಶರರ ಪ್ರಾಗತಿಕತೆ ಇದರಿಂದ ನೊಂದುಕೊಂಡಿತು. "ಇದು ಯಾವನೇ ರಾಷ್ಟ್ರೀಯವಾದಿ ಹೇಳುವ ಮಾತಾಯಿತು. ನೀವು ಇದಕ್ಕಿಂತ ಶ್ರೇಷ್ಠವಾದುದನ್ನು ಹೇಳಬೇಕಾಗಿತ್ತು," ಎಂದರವರು.

"ಹಾಗಿದ್ದರೆ ನಾನಂತೂ ರಾಷ್ಟ್ರೀಯವಾದಿಯೆ ಆಗಲು ಬಯಸುತ್ತೇನೆ" ಗಾಂಧೀಜಿ ದೃಢತೆಯಿಂದ ನುಡಿದರು. "ಹಿಂದೀಯರನ್ನು ಸಮಾನಿಕರಂತೆ ನಡೆಸಿಕೊಳ್ಳಲು ಅವರು ಸಿದ್ಧರಿಲ್ಲದಿದ್ದರೆ ಇಲ್ಲಿ ಬರುವ ಹಕ್ಕು ಅವರಿಗಿಲ್ಲವೇ ಇಲ್ಲ."

"ಹಕ್ಕಿಲ್ಲ, ನಿಜ," ಒಪ್ಪಿದರು ಫಿಶರ "ಆದರೆ ನೀವು ಅವರಿಗೆ ಅವರ ಹಕ್ಕಿಗಿಂತ ಹೆಚ್ಚು ಕೊಡಬೇಕು. ನೀವು ಅವರನ್ನು ಆಮಂತ್ರಿಸಬೇಕು."

"ಹೌದು, ನಾನು ವಾಯಿಸರಾಯನಾದಾಗ."

"ಅಂದರೆ- ಹಿಂದೀ ಪ್ರಜಾರಾಜ್ಯದ ಅಧ್ಯಕ್ಷರಾದಾಗ, ಎಂದರ್ಥವೆ ?"

"ಅಲ್ಲ. ತತ್ಕಾಲಕ್ಕೆ ನಾನು ವಾಯಿಸರಾಯನಾಗುವದರಿಂದಲೇ, ಅಂದರೆ ಘಟನಾಬದ್ಧ ವಾಯಿಸರಾಯನಾಗುವದರಿಂದಲೇ, ಸಂತುಷ್ಟನಾಗುವೆನು," ಮುಂದುವರಿದರು ಗಾಂಧೀಜಿ. "ಆಗ ನಾನು ಮಾಡುವ ಮೊದಲನೆ ಕೆಲಸವೆಂದರೆ ವಾಯಿಸರಾಯ ಭವನವನ್ನು ತೆರವು ಮಾಡಿ ಅದನ್ನು ಹರಿಜನರಿಗೆ ಕೊಡುವದು. ಆ ಮೇಲೆ ನಾನು ದಕ್ಷಿಣ ಆಫ್ರಿಕೆಯ ಬಿಳಿಯ ಆಗಂತುಕರನ್ನು ನನ್ನ ಗುಡಿಸಲಿಗೆ ಕರೆಯುವೆ. ಮತ್ತು ಹೇಳುವೆ: 'ನೀವು ನನ್ನ ಜನರನ್ನು ಶಿಕ್ಕೆ ಪಡಿ ಮಾಡಿದ್ದೀರಿ. ಆದರೆ ನಾವು ನಿಮ್ಮ ಅನುಕರಣೆ ಮಾಡುವದಿಲ್ಲ. ನಾವು ನಿಮಗೆ ನಿಮ್ಮ ಯೋಗ್ಯತೆಗಿಂತ ಹೆಚ್ಚಿಗೆ ಕೊಡುವೆವು. ನೀವು ದಕ್ಷಿಣ ಅಫ್ರಿಕೆಯಲ್ಲಿ ಮಾಡುವಂತೆ ನಾವು ನಿಮಗೆ ಚಿತ್ರ ಹಿಂಸೆ ಕೊಡುವದಿಲ್ಲ.' ಈ ಪ್ರಕಾರ ಅವರನ್ನು ಲಜ್ಜಿತರನ್ನಾಗಿ ಮಾಡಿ ಸರಿದಾರಿ ಹಿಡಿಸುವೆ."

"ಇಂದು ಬಿಳಿಯರ ಬಗ್ಗೆ ಅತಿರೇಕ ದ್ವೇಷ ಭಾವನೆಯಿದೆ," ಎಂದು ಫಿಶರರು ಚಿಂತೆಯಿಂದ ಎಡೆನುಡಿದರು.

"ವಸ್ತುತಃ ನನಗೂ ಅದು ಮೆಚ್ಚುವದಿಲ್ಲ. ಅದರಿಂದ ಯಾರಿಗೂ ಯಾವ ಕಲ್ಯಾಣವೂ ಆಗಲಾರದು."

"ಜಗತ್ತು ಹೀಗೆ ಇಬ್ಬಣವಾಗಿದೆ. ಜಗತ್ತಿನಲ್ಲಿ ಇನ್ನೊಂದು ಯುದ್ಧವಾಗಬಹುದು, ಅದರಲ್ಲಿ ಬಿಳಿಯರನ್ನು ಇತರ ಜನಾಂಗಗಳು ಎದುರಿಸಬಹುದು."

"ಯುರೋಪು ಇನ್ನೊಂದು ಯುದ್ಧದ ಕಡೆಗೆ ಧಾವಿಸುತಿರುವಂತಿದೆ. ಅದು ಇನ್ನೂ ಸಾಕಷ್ಟು ಬಾಳಲಿಲ್ಲ."

"ಯುರೋಪಿಗೆ ಭಯಂಕರ ಬಳಲಿಕೆಯಾಗಿದೆ. ಆದರೆ ಪರಮಾಣು ಬಾಂಬಿನ ಅಬ್ಬರದಲ್ಲಿ ಮಾನವ ಪ್ರಾಣಿಗಳಿಗೆ ಅಷ್ಟು ಬೆಲೆಯೆ ಇಲ್ಲ. ಕೆಲವು ವೈಜ್ಞಾನಿಕರಿದ್ದರೆ ಯಥೇಷ್ಟವಾಯಿತು. ಮುಂದಿನ ಯುದ್ಧ ಕೆಲವು ಗುಂಡಿಗಳನ್ನು ಒತ್ತುವ ಮೂಲಕವೇ ಸಾಗಿಸಲ್ಪಡುವದು. ಅದರಿಂದಲೇ ವರ್ಣ ಯುದ್ಧ ಬಹಳ ಅಪಾಯಕರವಾಗಿದೆ."

"ಹೇಡಿತನಕ್ಕಿಂತ ಏನಾದರೂ ಬೇಕು. ಅದು ಇಮ್ಮಡಿ ಹಿಂಸೆ." ಇದಕ್ಕೆ ದೃಷ್ಟಾಂತವಾಗಿ ಗಾಂಧೀಜಿ ಒಂದು ಕತೆ ಹೇಳಿದರು. ದಕ್ಷಿಣ ಆಫ್ರಿಕೆಯಲ್ಲಿ ಒಮ್ಮೆ ಭೀಮಕಾಯನಾದ ನಿಗ್ರೋ ಪಾದ್ರಿಯೊಬ್ಬನನ್ನು ಬಿಳಿಯನು ಅಪಮಾನ ಗೊಳಿಸಿದಾಗ "ಕ್ಷಮಿಸು ಗೆಳೆಯ" ಎಂದು ಹೇಳಿ ಆ ಪಾದ್ರಿ ಕರಿಯರಿಗಾಗಿ ಕಾದಿಟ್ಟ ಡಬ್ಬಿಯೊಳಗೆ ನುಸುಳಿದನಂತೆ. "ಇದು ಅಹಿಂಸೆಯಲ್ಲ. ಅದು ಯೇಸುವಿನ ಉಪದೇಶದ ವಿಕೃತಿ. ಆಗ ಪ್ರತೀಕಾರ ಮಾಡಿದ್ದರೆ ಅದು ಹೆಚ್ಚು ಪೌರುಷದ ಮಾತಾಗುತಿತ್ತು."

"ನಮಗೆ ಬರಬಹುದಾದ ವಿಪತ್ತಿಗೆ ನಾವು ಹೆದರುವದಿಲ್ಲ. ಆದರೆ ಅದು ಇತರರ ಮೇಲೆ ಎಂಥ ಪರಿಣಾಮ ಮಾಡೀತೆಂಬುದೇ ಚಿಂತೆ" ಎಂದು ಗಾಂಧೀಜಿಯವರ ದೃಷ್ಟಾಂತವನ್ನು ಪೃಥಕ್ಕರಿಸುತ್ತ ವ್ಯಾಖ್ಯಾನ ಮಾಡಿದರು. ಫಿಶರ್. "ನೀವು ಉದಾಹರಿಸಿದ ಸನ್ನಿವೇಶದಲ್ಲಿ, ಮನಸ್ಸಿನ ಉದ್ವೇಗವನ್ನು ಪ್ರದರ್ಶಿಸಿ ಬಿಳಿ ಮನುಷ್ಯನ ಕೆನ್ನೆಗೊಂದೇಟು ಬಿಗಿಯಹೋಗುವವನು ಬಹಳ ಹೊಣೆಗೇಡಿಯಾಗಿರಬೇಕು. ಹಿಂದುಸ್ತಾನದಲ್ಲಿ ಪರಿಸ್ಥಿತಿ ಬೇರೆಯೆ ಇದೆ. ಇಲ್ಲಿ ಹೆಚ್ಚು ಜನ ಬಿಳಿಯರಿಲ್ಲ."

"ನೀವು ತಪ್ಪು ತಿಳಿದುಕೊಂಡಿದ್ದೀರಿ" ಗಾಂಧೀಜಿ ಉತ್ತರವಿತ್ತರು. "ಏಕೆ, ಒಬ್ಬ ಇಂಗ್ಲೀಷನನ್ನು ಕೊಂದ ತಪ್ಪಿಗೆ ಇಡೀ ಹಳ್ಳಿಯನ್ನೆ ನೆಲಸಮ ಮಾಡಿ ಸೇಡುತೀರಿಸಿಕೊಳ್ಳಲಾಗಿದೆ ಇಲ್ಲಿ. ಎಂಥ ಪ್ರತಿಹಿಂಸಾ ಬುದ್ಧಿ!"

### ಸಮಸ್ಯೆಗೆ ಉತ್ತರ

ಅಪ್ಪಿಕ್ಕೆ ಮೊದಲ ದಿನದ ಚರ್ಚೆ ಸಮಾಪ್ತವಾಯಿತು. ಆದರೆ ಘಟನಾ ಸಮಿತಿಯನ್ನು ಕುರಿತ. ಗಾಂಧೀಜಿ ವಹಿಸಿರುವ ನಿಲುಮೆಯ ಕೆಲವು ಸಮಸ್ಯೆಗಳು ಲುಯಿಫಿಶರರ ತಲೆಯನ್ನು ತಿನ್ನುತ್ತಲೇ ಇದ್ದವು. ಮರುದಿನದ ಮಾತುಕತೆಗಳಲ್ಲಿ ಆ ಮಾತಿಗೇ ಅವರು ಹಿಂತಿರುಗಿದರು.

"ಕಾಂಗ್ರೆಸ್ ಕಾರ್ಯ ಸಮಿತಿಯವರು 'ಕತ್ತಲಲ್ಲಿ ಕೈಯಾಡಿಸುತಿದ್ದೇನೆ' ಎಂಬ ನಿಮ್ಮ ಹೇಳಿಕೆಯಿಂದ, ಅರ್ಥಾತ್ ದೀರ್ಘಾವಧಿ ಯೋಜನೆಯನ್ನು ಕುರಿತ ನಿಮ್ಮ ಅಂತಃಪ್ರೇರಣೆಯಿಂದ ಪ್ರಭಾವಗೊಂಡಿದ್ದರೆ, ಅವರು ಅದನ್ನು ತಿರಸ್ಕರಿಸುತಿದ್ದರೆ ?"

"ತಿರಸ್ಕರಿಸುತಿದ್ದರು. ಆದರೆ ನಾನು ಹಾಗಾಗಗೊಡಲಿಲ್ಲ," ಗಾಂಧೀಜಿ ಮಾರ್ನುಡಿದರು.

"ಅಂದರೆ ನೀವು ಒತ್ತಾಯಗೊಳಿಸಲಿಲ್ಲ ?"

"ಅಷ್ಟೇ ಅಲ್ಲ. ಅವರ ಮನಸ್ಸಿಗೂ ಅದೇ ಭಾವನೆ ಮೂಡಿದ ಹೊರತು ನನ್ನ ಅಂತಃಪ್ರೇರಣೆಯನ್ನು ಅವರು ಅನುಸರಿಸದಂತೆ ನಾನು ತಡೆದೆನು. ಏನು ಸಂಭವಿಸುತಿತ್ತೋ ಎಂದು ಊಹಿಸುತ್ತ ಕೂಡುವದು ವ್ಯರ್ಥ. ಆದರೆ ವಸ್ತುಸ್ಥಿತಿ ಹೀಗಿದೆ— ಡಾ. ರಾಜೇಂದ್ರ ಪ್ರಸಾದರು ನನ್ನನ್ನು ಕೇಳಿದರು: 'ನಮಗೆ ನಿಮ್ಮ ಅತಃ ಪ್ರೇರಣೆ ಅರ್ಥವಾಗಲಿ ಆಗದಿರಲಿ ನಾವು ದೀರ್ಘಾವಧಿ ಯೋಜನೆಯನ್ನು ಸ್ವೀಕರಿಸಬಾರದೆಂದು ಹಟತೊಡುವ ಈ ನಿಮ್ಮ ಅಂತಃ ಪ್ರೇರಣೆ ತೀವ್ರವಾಗಿದೆಯೆ ?'" ನಾನೆಂದೆ? "ಇಲ್ಲ. ನನ್ನ ಅಂತಃಪ್ರೇರಣೆಯನ್ನು ಪ್ರತಿಪಾದಿಸಲು ನನ್ನಲ್ಲಿ ಕಾರಣವಿಲ್ಲ. ಅದ್ದರಿಂದ ನೀವು ನಿಮ್ಮ ಕಾರ್ಯಕಾರಣ ವಿವೇಕವನ್ನೆ ಅನುಸರಿಸಿರಿ. ನನ್ನ ಅಂತಃಪ್ರೇರಣೆ ನನ್ನ ಕಾರ್ಯಕಾರಣ ವಿವೇಕದ ವಿರುದ್ಧ ದಂಗೆಯೆದ್ದಿದೆ. ನಾನು ನನ್ನ ಶಂಕೆಗಳನ್ನು ನಿಮ್ಮ ಮುಂದಿಡಲು ಕಾರಣವಿಷ್ಟೆ ನಿಮ್ಮಲ್ಲಿ ಮುಚ್ಚುಮರೆ ಮಾಡಲು ನನಗೆ ಮನಸಿಲ್ಲ. ಸ್ವತಃ ನಾನೇ ಆದರೂ ನನ್ನ ತರ್ಕ ಶಕ್ತಿ ನನ್ನ ಅಂತಃಪ್ರೇರಣೆಗೆ ಬೆಂಬಲವಿತ್ತ ಹೊರತು ಅಂತಃಪ್ರೇರಣೆಯನ್ನು ಅನುಸರಿಸಲಾರೆ."

"ಆದರೆ ಕೆಲವೊಂದು ಪ್ರಸಂಗದಲ್ಲಿ, ಉದಾಹರಣೆಗಾಗಿ ನಿಮ್ಮ ಕೆಲವು ಉಪವಾಸಗಳನ್ನು ನೀವು ಕೈಕೊಳ್ಳುವಾಗ, ಅಂತಃಪ್ರೇರಣೆಯನ್ನು ಅನುಸರಿಸುತ್ತಿರುವದಾಗಿ ಹೇಳಿದ್ದೀರಿ"

"ಅಹುದು: ಆದರೆ ಆ ಪ್ರಸಂಗಗಳಲ್ಲಿ ಕೂಡ ಉಪವಾಸ ಪ್ರಾರಂಭವಾಗುವ ಮೊದಲು ನನ್ನ ತರ್ಕಶಕ್ತಿ ನನ್ನ ಅಂತಃಪ್ರೇರಣೆಯನ್ನು ಪುಷ್ಟೀಕರಿಸಲು ಸಮರ್ಥವಾಗಿತ್ತು. ಈ ದೀರ್ಘಾವಧಿ ಯೋಜನೆಯ ವಿಷಯದಲ್ಲಿ ಮಾತ್ರ ತರ್ಕಶಕ್ತಿ ಅಂತಃಪ್ರೇರಣೆಯ ಕೈಬಿಟ್ಟಿದೆ"

"ಹಾಗಿದ್ದರೆ ನಿಮ್ಮ 'ಅಂತಃಪ್ರೇರಣೆ'ಯನ್ನು ರಾಜಕೀಯ ವಾತಾವರಣದಲ್ಲಿ ಚುಚ್ಚಿದಿರೇಕೆ ?"

"ಏಕೆಂದರೆ ನಾನು ನನ್ನ ಗೆಳೆಯರಲ್ಲಿ ಪ್ರಾಮಾಣಿಕನಾಗಿದ್ದೇನೆ. ಮಂತ್ರಿ ರಾಯಭಾರಿಗಳ ಸದುದ್ದೇಶದಲ್ಲಿ ನಂಬಿಕೆಯಿಡುವ ಅಪೇಕ್ಷೆ ನನ್ನಲ್ಲಿತ್ತು. ಅದುದರಿಂದ ನಾನು ನನ್ನ ಅಶಂಕೆಗಳನ್ನು ಮಂತ್ರಿ ರಾಯಭಾರಿಗಳಿಗೂ ಆಡಿತೋರಿಸಿದೆ. ನನ್ನ ಮಟ್ಟಿಗೆ ನಾನು ಅಂದುಕೊಂಡೆ: 'ಅವರು ಕೇಡು ಬಯಸಿದ್ದರೆ ತಾವೇ ನಾಚಿಕೊಳ್ಳುವರು.'"

### ಶ್ರದ್ಧಾವಾದ

"ನೀವೀಗ ಕಾಯದೆಬದ್ಧ ಚಟುವಟಿಕೆಯ ನಿಷ್ಠುರ ಅನುಯಾಯಿಯಾಗಿಬಿಟ್ಟಿದ್ದೀರಿ. ಬಲಾತ್ಕಾರವಾದ ಹಿಂಸೆಯ ಭಯವೇ ಇದಕ್ಕೆ ಕಾರಣವೆ ?" ಕೇಳಿದರು ಫಿಶರ್.

"ಅಲ್ಲ. ಹಿಂದುಸ್ತಾನದ ಹಣೆಯಲ್ಲಿ ರಕ್ತಸ್ನಾನವೇ ಬರೆದಿದ್ದರೆ ಅದನ್ನು ತಪ್ಪಿಸುವವರಾರು? ನಾನು ಭಯಪಡಬಹುದಾದುದು ನನ್ನ ಸ್ವೀಯ ಹೇಡಿತನ ಅಥವಾ ಅಪ್ರಾಮಾಣಿಕತೆಗೆ. ಅವೆರಡೂ ನನ್ನಲ್ಲಿಲ್ಲ. ಅದ್ದರಿಂದ ನಾವು (ಘಟನಾ ಸಮಿತಿಯಲ್ಲಿ) ಒಳಹೊಕ್ಕು ಕೆಲಸ ಮಾಡೋಣವೆನ್ನುತ್ತೇನೆ. ಅವರು ಅಪ್ರಾಮಾಣಿಕರಾಗಿದ್ದರೆ ಸಿಕ್ಕಿಬೀಳುವದು ಖಂಡಿತ. ಅದರಿಂದ ಹಾನಿ ಅವರಿಗೆ ಹೊರತು ನಮಗಿಲ್ಲ."

"ಹಿಂಸಾ ಭಾವನೆಗೆ ನೀವು ಹೆದರುತಿದ್ದೀರೆಂದು ನನಗೆ ತೋರುತ್ತದೆ. ಅದು ಎತ್ತೆತ್ತಲೂ ಹಬ್ಬಿದೆ. ಯುವಕರ ಮನಸ್ಸನ್ನು ಅದು ಆಕ್ರಮಿಸಿಬಿಟ್ಟಿದೆಯೇನೋ ಎನಿಸುತಿದೆ. ನಿಮಗೆ ಇದು ಗೊತ್ತಿದೆ, ಎಂತಲೇ ನಿಮ್ಮ ಭೀತಿ."

"ಅದು ದೇಶದ ಮನಸ್ಸನ್ನು ಆಕ್ರಮಿಸಿಲ್ಲ. ಅದು ಯುವಕರಲ್ಲಿ ಒಂದು ಗುಂಪಿನ ಬುದ್ಧಿಯನ್ನು ಆಕ್ರಮಿಸಿದೆಯೆಂದು ನಾನು ಒಪ್ಪುತ್ತೇನೆ."

"ನಾವು ತಡೆಗಟ್ಟಬೇಕಾದುದು ಈ ಮನೋಲಹರಿಗಳನ್ನು."

"ಹೌದು, ಅದನ್ನೆ ತಡೆಗಟ್ಟಲು ನಾನು ನನ್ನದೇ ರೀತಿಯಲ್ಲಿ ಹೆಣಗುತ್ತಿದ್ದೇನೆ. ಅದು ಕಾಲ ಮೀರಿ ಬದುಕಿದ ಲಹರಿ. ಅದು ಸತ್ತೇ ತೀರುವದು. ಅದು ಬದುಕಲಾರದು. ಅದು ಹಿಂದುಸ್ತಾನದ ಮನೋಭೂಮಿಕೆಗೆ ಸರ್ವಥಾ ಒಗ್ಗುವದಿಲ್ಲ. ಆದರೆ ಮಾತಿನದೇನು ಫಲ ? ನಮ್ಮ ಅದೃಷ್ಟಗಳನ್ನೆಲ್ಲ ನಿಯಂತ್ರಿಸುವ ಊಹಾತೀತವಾದ ವಿಧಿಯೊಂದಿದೆಯೆಂದು ನನ್ನ ನಂಬಿಕೆ—ಅದನ್ನು ದೇವರೆಂದು ಕರೆಯಿರಿ, ಬೇರೇನಾದರೂ ಹೆಸರಿಂದ ಕರೆಯಿರಿ. ಹಿಂಸೆಯ ಭಯದಿಂದಲೇ ನಾನು ಘಟನಾಸಮಿತಿಯಲ್ಲಿ ಪ್ರವೇಶಿಸಿರೆಂದು ದೇಶಕ್ಕೆ ಉಪದೇಶ ಮಾಡಿಲ್ಲವೆಂದಿಷ್ಟೇ ನನ್ನ ಹಟ. ಸವಿನಯ ಬಂಡಾಯಕ್ಕೆ ಪ್ರತಿಯಾಗಿ ದೊರೆತಿರುವ ಬೇರೊಂದು ಸಾಧನವನ್ನು ಅಂಗೀಕರಿಸದಿರುವದು ಅಹಿಂಸಾತ್ಮಕ ನೀತಿಗೆ ಒಗ್ಗುವದಿಲ್ಲ."

ಪಂಚಗಣಿ
೨೭—೭—೪೬

—ಪ್ಯಾರೆಲಾಲ

### ಕೆಟ್ಟ ಚಟ

ಭಗಿನಿಯೊಬ್ಬಳು ಬರೆಯುತ್ತಾಳೆ— "ಎಲ್ಲಿ ಬೇಕಾದಲ್ಲಿ ಉಗುಳುವುದರಿಂದಾಗುವ ಘಾತಕ ಪರಿಣಾಮವನ್ನು ತಿಳಿದುಕೊಳ್ಳಿರೆಂದು ಹಲವು ವರ್ಷಗಳಿಂದ ನಾನು ಅನೇಕರಿಗೆ ಹೇಳುತ್ತ ಬಂದಿರುವೆನು. ಉಗುಳುವುದರಿಂದ ಬಹಳ ಹೊಲಸುಂಟಾಗುವುದು. ಅದನ್ನು ಹೋಗಲಾಡಿಸಲೇನು ಮಾಡಬೇಕೆಂಬುದು ತಿಳಿಯದಂತಾಗುವದು. ಸಣ್ಣ ಹುಡುಗರು ಹುಡಿಗೆಯರು ಸುಶಿಕ್ಷಿತ ಸ್ತ್ರೀ ಪುರುಷರು, ಅಶಿಕ್ಷಿತ ಜನರನ್ನು ಬಿಟ್ಟುಬಿಡಿರಿ, ಇವರೆಲ್ಲ ರೇಲ್ವೆ ಪ್ಲಾಟಫಾರ್ಮುಗಳಲ್ಲಿ ಡಬ್ಬಿಗಳಲ್ಲಿ, ಟ್ರಾಮುಗಳಲ್ಲಿ ಅಂಗಡಿಗಳ ಹೊರಗೆ ಮನೆಯ ಹೊರಗಿನ ಮಾರ್ಗದಲ್ಲಿ, ಮನೆಯ ಹೊರಗೆ ಮತ್ತು ಎಲ್ಲೆಡೆ ಉಗುಳುವದು ನಮ್ಮ ದೇಶ ದಿನ ದಿನಕ್ಕೆ ಹೆಚ್ಚೆಚ್ಚು ಹೊಲಸಾಗಹತ್ತಿದೆ. ಎಲ್ಲೆಡೆ ರೋಗ ಹಬ್ಬಹತ್ತಿವೆ. ಸ್ವಚ್ಛತೆಯ ಸಂದೇಶ ಬೀರುವದಕ್ಕಾಗಿ ಸ್ವಯಂಸೇವಕರು ಮುಂದೆ ಬರುವದಿಲ್ಲವೆ?"

ಅವ್ಯವಸ್ಥಿತ ರೀತಿಯಿಂದ ಉಗುಳುವುದು ಕೆಟ್ಟ ಚಟ ಅನೇಕ ಸಲ ಈ ಬಗ್ಗೆ ನಾನು ಟೀಕಿಸಿದ್ದೇನೆ. ಸ್ವಚ್ಛತೆ ಮತ್ತು ಆರೋಗ್ಯದ ಮೂಲಭೂತ ನಿಯಮಗಳ ಸಂಬಂಧದಲ್ಲಿ ನಮ್ಮ ಜನತೆ ಅಜ್ಞಾನದಲ್ಲಿ ಮುಳುಗಿ ಹೋಗಿದೆಂಬುದರ ದ್ಯೋತಕವಿದು. ನಾವು ಹಲವಾರು ಬೇನೆಗಳಿಂದ ಮುಕ್ತರಾಗಬಯಸಿದರೆ ಈ ಕೆಟ್ಟ ಚಟವನ್ನು ಬಿಟ್ಟುಗೊಡಲಿಕ್ಕೆ ಬೇಕು. ನಮ್ಮ ಪತ್ರಲೇಖಕರು ಮಾಡಿದ ಸೂಚನೆ ಯೋಗ್ಯವಾಗಿದೆ.

ಪಂಚಗಣಿ
೧೪—೭—೪೬

ಮೋ. ಕ. ಗಾಂಧಿ



# ಕರ್ನಾಟಕ

### ಧಾರವಾಡ

ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ೮೬ ನೇ ಸಂಸ್ಥಾಪನಾದಿನೋತ್ಸವ ಜುಲೈ ೨೦ ಕ್ಕೆ ಶ್ರೀ ಚಂದ್ರಶೇಖರ ಕರದಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ಆ ಕಾಲಕ್ಕೆ ರೆ. ಕಿಟ್ಟಲರರ ಭಾವಚಿತ್ರವನ್ನು ಅನಾವರಣ ಮಾಡುತ್ತ ಶ್ರೀ ಕರದಿಯವರು ಅಮೋಘ ಭಾಷಣ ಮಾಡಿದರು.

ಹುಬ್ಬಳ್ಳಿ ನಗರ ಸಭೆಯ ಸಭೆ ಸೇರಿ ಶ್ರೀ ಬಿ ಎನ್ ಬೆಂಡಿಗೇರಿಯವರು ಅಧ್ಯಕ್ಷರು ಶ್ರೀ ಬಿ ಎ ದೇಸಾಯರು ಉಪಾಧ್ಯಕ್ಷರು ಮತ್ತು ಎಸ್ ಜಿ ಮಗಜಿಕೊಂಡಿಯವರು ಸ್ಟ್ಯಾಂಡಿಂಗ ಕಮೀಟಿಯ ಚೇರಮನರಾಗಿ ಆರಿಸಲ್ಪಟ್ಟರು. ಉಳಿದ ಸಮಿತಿಗಳೂ ರಚಿತವಾದವು. ಹಳೆಯ ಪಕ್ಷವು ಬದಲಾಗಿ ಹೊಸದೊಂದು ಪಕ್ಷ ಈ ವರ್ಷ ಸ್ಥಾಪಿತವಾಗಿದೆ. ಮೂರು ವರುಷಗಳಲ್ಲಿ ಮೂರು ಪಕ್ಷ ಸ್ಥಾಪಿತವಾದಂತಾಯಿತು.

### ವಿಜಾಪುರ

ಸರಕಾರದವರು ನೊಟ್ಟಿ ಬಾವಿಗಳಿಗೆ ಸಹಾಯ ಕೊಡುವ ಆಶ್ವಾಸನವಿತ್ತದ್ದಕ್ಕಾಗಿ ಹಳ್ಳಿಗಳ ರೈತರು ತಮ್ಮ ಹೊಲಗಳಲ್ಲಿ ಹೊಸ ಬಾವಿಗಳನ್ನು ಅಗೆಯಲು ಮತ್ತು ಹಳೆಯವನ್ನು ದುರಸ್ತಿ ಮಾಡಲು ಪ್ರಾರಂಭಿಸಿದರು. ಈಗ ಅರ್ಜಿ ಹಿಡಿದುಕೊಂಡು ಎಡತಾಕಿದರೂ ಹಣ ದೊರೆಯದಂತಾಗಿದೆ. ಹಲವರ ಕೆಲಸ ಮುಗಿಯದ್ದರಿಂದ ಅಲ್ಲಿಯೇ ಕುಳಿತಿವೆ. ಬೆಳೆಗಳಿಗೆ ಹೊಸ ನೀರು ಸಿಕ್ಕಲೊಲ್ಲದಾಗಿದೆ.

ಬೆಳಗಾವಿಯ ಶ್ರೀ ಕೇಶವರಾವ ಗೋಖಲೆಯವನು ಪ್ಲುರಸಿಯ ಮೂಲಕ ಹವೆ ಬದಲಾಯಿಸಲು ವಿಜಾಪುರಕ್ಕೆ ಬಂದಿದ್ದು ಸಪ್ಟೆಂಬರ ೪ ರ ವರೆಗೆ ಅಲ್ಲಿಯೇ ಉಳಿಯುವರು.

ಬಾಗಿಲಕೋಟೆಯಲ್ಲಿ ಹಾಲಿನ ಪುಡಿ ಬಂದು ಬಿದ್ದು ೩ ತಿಂಗಳಾದರೂ ಸರಿಯಾದ್ದ ಹಂಚುವಿಕೆಗೆ ಇನ್ನೂ ಮುಹೂರ್ತ ಬರಲೊಲ್ಲದಾಗಿದೆ. ಕೆಲ ಶಾಲೆಗಳಲ್ಲಿ ಮಾತ್ರ ಹಂಚುವದು ಸುರು ಮಾಡಿದ್ದಾರೆ.

ಮುಂಬಯಿ ಸರಕಾರದವರು ವಿಜಾಪುರ ಜಿಲ್ಲೆಯ ಕಲಾದಗಿ, ಕಮತಗಿ, ಕೆರೂರ ಹಾಗು ಬಾಗಿಲಕೋಟೆಯಲ್ಲಿ ಸೀದಾ ಯೋಜನೆ ಕಾಯದೆ, ಮುಂಬಯಿ ಸೀದಾ ವಿಚಾರಣೆ ಹುಕುಮು ಹಾಗು ಮುಂಬಯಿ ಸೀದಾ ಹುಕುಮುಗಳನ್ನು ಅನ್ವಯಿಸಿದ್ದಾರೆ.

### ಬಳ್ಳಾರಿ

ಉರವಕೊಂಡದಲ್ಲಿಯ ಕರಿಬಸವರಾಜೇಂದ್ರ ಮಹಾಸ್ವಾಮಿಗಳನ್ನು ಸ್ಥಳಿಕ ಮುಸಲ್ಮಾನರು ಮಸೀದೆಗೆ ಕರೆದುಕೊಂಡು ಹೋಗಿ ಸಂಭ್ರಮದ ಸ್ವಾಗತವಿತ್ತರು. ಮತ್ತು ಭಕ್ತಿಪುರಸ್ಸರವಾಗಿ ೧೦೦೧ ರೂ. ಕಾಣಿಕೆ ಕೊಟ್ಟರು. ಹಿಂದೂ ಮುಸ್ಲಿಮರು ಅನ್ಯೋನ್ಯ ಪ್ರೀತಿ ಬೆಳೆಸಿಕೊಂಡು ಇರಬೇಕೆಂದು ಸ್ವಾಮಿಗಳು ಉಪದೇಶಿಸಿದರು.

ಬಳ್ಳಾರಿ ಪೌರ ಸಭೆಯ ನವಕರರು ತಮ್ಮ ಸಂಬಳ ಭಕ್ತೆ ಮತ್ತು ಇತರ ಕುಂದು ಕೊರತೆಗಳಿಗೆ ಸರಿಯಾದ ಪರಿಹಾರ ದೊರೆಯದಿದ್ದರೆ ೧೦-೮-೪೬ರಿಂದ ಸಂಪು ಹೂಡಲು ತಮ್ಮ ನಿರ್ಧಾರವನ್ನು ಅಧಿಕಾರಿಗಳಿಗೆ ತಿಳಿಸಿದ್ದಾರೆ.

ಬಳ್ಳಾರಿ ಜಿಲ್ಲಾ ಕಾಂಗ್ರೆಸ ಕಮೀಟಿ ಸಭೆ ಸೇರಿ ಶ್ರೀ ಟೇಕೂರು ಸುಬ್ರಹ್ಮಣ್ಯರು ಅಧ್ಯಕ್ಷರು ವೀರಸ್ವಾಮಿ ಪಂಚಯ್ಯನವರು ಉಪಾಧ್ಯಕ್ಷರು ಎಸ್ ಬಸನಗೌಡರು ಹಾಗು ಅಸುಂಡಿ ತಿರುಮಲರಾಯರು ಕಾರ್ಯದರ್ಶಿಗಳಾಗಿ ದೊಡ್ಡ ಬಸಪ್ಪನವರು ಕೋಶಾಧ್ಯಕ್ಷರಾಗಿಯೂ ಆರಿಸಲ್ಪಟ್ಟರು. ಸುಬ್ರಹ್ಮಣ್ಯಂರನ್ನು ಘಟನಾ ಸಮಿತಿಗೆ ಆರಿಸದಿದ್ದುದಕ್ಕಾಗಿ ನಿಷೇಧ ಪ್ರದರ್ಶಿಸಲಾಯಿತು.

ಬಳ್ಳಾರಿಯಲ್ಲಿ ಬಟ್ಟೆಯ ವಿಷಯವಾಗಿ ಪರಿಶೀಲನೆಯಾಯಿತು. ನಗರದಲ್ಲಿ ಒಂದು ಲಕ್ಷ ಗಜ ಅರಿವೆ ಇದ್ದು ನಾಗರಿಕರಿಗೆ ಒಬ್ಬರಿಗೆ ೧॥ ಗಜದಂತೆ ಸಾಲುವದು. ಎಪ್ರಿಲ ತಿಂಗಳ ಕೋಟ್ಯೂ ಇನ್ನೂ ಬಂದಿಲ್ಲ ಬಟ್ಟೆ ಕಳಿಸಲು ಕೂಡಲೆ ಬರೆಯಬೇಕೆಂದು ನಿರ್ಣಯಿಸಲಾಯಿತು.

### ಬೆಳಗಾವಿ

ಬೈಲಹೊಂಗಲದಲ್ಲಿ ಒಂದು ವಾರದಿಂದ ಮಳೆ ಹತ್ತಿದೆ ೨೪ನೇ ತಾರೀಕು ಒಂದೇ ದಿನ ೧೪ ಗಂಟೆಗಳಲ್ಲಿ ೪ ಇಂಚು ಮಳೆಯಾಗಿದೆ. ರೈತರು ಸಂತುಷ್ಟರಾಗಿದ್ದಾರೆ.

### ಉತ್ತರ ಕನ್ನಡ

ಅಂಕೋಲೆ ತಾಲೂಕಿನಲ್ಲಿ ಮೈಲೀಬೇನೆ ಪ್ರಾರಂಭವಾಗಿ ೨೨ನೇ ತಾರೀಕಿನೊಳಗಾಗಿ ೯ ಜನ ಬಲಿಯಾಗಿದ್ದರು. ಒಂದು ತಿಂಗಳಲ್ಲಿ ೪೦೦೦ ಜನರಿಗೆ ಮೈಲೀ ಚುಚ್ಚಲಾಗಿದೆ.

ಪೋಲೀಸರು ಕಳ್ಳ ಪೇಟೆ ಸಂಬಂಧದಲ್ಲಿ ಕಾರವಾರದ ಓರ್ವ ವ್ಯಾಪಾರಿಗಳ ಮೇಲೆ ಖಟ್ಲೆ ಹಾಕಿದ್ದಾರೆ. ಅಂಕೋಲೆಯಲ್ಲಿ ಹೆಚ್ಚಿನ ಧಾರಣೆಯಿಂದ ಮಾರಿದ ಬಗ್ಗೆ ಮೂವರನ್ನು ಹಿಡಿದು ಜಾಮೀನ ಮೇಲೆ ಬಿಡಲಾಗಿದೆಂದು ತಿಳಿಯುತ್ತದೆ.

ಕಳೆದ ರವಿವಾರ ಜಿಲ್ಲಾ ಕಾಂಗ್ರೆಸ ಕಮೀಟಿ ಸಭೆ ಸೇರಿ ಶ್ರೀ ತಿ ಶ್ರೀ ನಾಯಕರು ಅಧ್ಯಕ್ಷ, ಟಿ. ಎಂ. ಮಾರ್ಟಿನ್‌ಸರ ಹೆಗಡೆಯವರು ಉಪಾಧ್ಯಕ್ಷರು ಎಸ್. ಕೆ. ಪೈಯವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ಜಿಲ್ಲಾ ಕಚೇರಿಯನ್ನು ಅಂಕೋಲೆಯಿಂದ ಶಿರ್ಶಿಗೆ ಸ್ಥಳಾಂತರಿಸಬೇಕೆಂದು ಗೊತ್ತಾಯಿತು.

೧೯೪೩—೪೪ ರಲ್ಲಿ ಹೊನ್ನಾವರದಲ್ಲಿ ಪೋಲೀಸ ಸಬ್ ಇನಸ್ಪೆಕ್ಟರರಾಗಿದ್ದವರು ಬಹಳ ಜನರಿಗೆ ಹಿಂದುಸ್ತಾನ ಸಂರಕ್ಷಣ ಕಾಯದೆಯನ್ವಯ ಬೆದರಿಕೆ ಹಾಕಿ ಲಂಚ ತಿಂದರೆಂಬ ಆರೋಪ ಬಹಳ ಹೋದ್ದರಿಂದ ಈಗ ಅದರ ವಿಚಾರಣೆ ನಡೆದಿದೆಯಂತೆ.

ಯಲ್ಲಾಪುರದ ಯೋಗ್ಯ ದರದ ಅಂಗಡಿ ನಂ. ೨ ರ ಚಾಲಕ ಶ್ರೀ ವಾಸುದೇವ ಬಾಳಗಿಯವರು ತಮ್ಮ ಗಾಡಿಯಲ್ಲಿ ೩೨ ಡಬ್ಬಿ ಜೇನುತುಪ್ಪ ಮತ್ತು ೩ ಮಣ ಮೇಣ ಹಾಕಿಕೊಂಡು ಪರಿಮಿಟ್ ಚೀಟಿಯಿಲ್ಲದೆ ಕಳ್ಳತನದಿಂದ ತರುತಿದ್ದಾಗ ಬೆಳಗೇರಿ ಗ್ರಾಮದಲ್ಲಿ ಜಂಗಲ ಇಲಾಖೆಯವರಿಂದ ಹಿಡಿಯಲ್ಪಟ್ಟರು. ಪಂಚನಾಮೆ ಮಾಡಲಾಗಿದೆ.

ಹಿಂದೆ ಭತ್ತ ಖರೀದಿಯ ಕಾಲಕ್ಕೆ ಸರಕಾರದ ವಂಚನೆ ಮಾಡಿದ ಬಗ್ಗೆ ಕಾರವಾರ ತಾಲೂಕ ಕಚೇರಿಯ ಕಾರಕೂನ ಶ್ರೀ ಭುಜಂಗ ಇವರ ಮೇಲೆ ಹಾಕಿದ ಖಟ್ಲೆಯ ವಿಚಾರಣೆ ಮುಗಿದು ಅವರು ನಿರಪರಾಧಿಯೆಂದು ತೀರ್ಮಾನಿಸಲಾಯಿತು.



## —ಹುಬ್ಬಳ್ಳಿ ನಗರಸಭೆಯ ಹೊಸ ಅಧಿಕಾರಿಗಳು—

ಅಧ್ಯಕ್ಷರು

ಶ್ರೀ. ಬಿ. ಎಸ್. ಬೆಂಡಿಗೇರಿ

ಉಪಾಧ್ಯಕ್ಷರು

ಬಿ. ಎ. ದೇಸಾಯಿ

ತಾ. ೨೪-೭-೪೬ನೇ ದಿನ ಕೂಡಿದ ಹುಬ್ಬಳ್ಳಿ ನಗರಸಭೆಯಲ್ಲಿ ಇವರು ಇನ್ನುಳಿದ ಅವಧಿಯ ಬಗ್ಗೆ ಅಧ್ಯಕ್ಷ ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು.

ಸ್ಥಾಯಿ ಸಮಿತಿ ಚೇರಮನರು

✲

ಶ್ರೀ ಎಸ್. ಜಿ. ಮಗಜಿಕೊಂಡಿ

## ಮಹಾರಾಷ್ಟ್ರ ಏಕೀಕರಣ ಪರಿಷತ್ತು

ಕಳೆದ ರವಿವಾರ ೨೮ನೇ ತಾರೀಕು ಮುಂಬಯಿಯಲ್ಲಿ ಶ್ರೀ ಶಂಕರರಾವ ದೇವ ಇವರ ಅಧ್ಯಕ್ಷತೆಯಲ್ಲಿ ಮಹಾರಾಷ್ಟ್ರ ಏಕೀಕರಣ ಪರಿಷತ್ತು ಸೇರಿತ್ತು. ಶ್ರೀ ಎಸ್. ಕೆ. ಪಾಟೀಲರು ಸ್ವಾಗತ ಭಾಷಣ ಮಾಡುತ್ತ ಸದ್ಯದ ಪ್ರಾಂತಗಳು ಯಾವದೊಂದು ತತ್ವಕ್ಕನುಸಾರವಾಗಿ ರಚಿಸಲ್ಪಡದೆ ಇರುವದರಿಂದ ಭಾಷಾನ್ವಯ ಪ್ರಾಂತ ರಚಿಸುವದತ್ಯವಶ್ಯವಾಗಿದೆಂದು ಹೇಳಿದರು. ಆದರೆ ಅದೇ ಕಾಲಕ್ಕೆ ಅವರು ವಿಷಮಯ ಪ್ರಾಂತೀಯತೆಯಿರಕೂಡದೆಂದು ಎಚ್ಚರಿಕೆ ಕೊಟ್ಟರು. ಏಕೀಕೃತ ಮಹಾರಾಷ್ಟ್ರವು ಸ್ವತಂತ್ರ ಹಿಂದುಸ್ತಾನದಲ್ಲಿ ಒಳ್ಳೆ ಪ್ರಗತಿಪರ ಘಟಕವೆಂದು ಖ್ಯಾತಿ ಹೊಂದುವುದೆಂದು ಆಸಿಸಿದರು. ಅಧ್ಯಕ್ಷರಾದ ಶ್ರೀ ಶಂಕರರಾವ ದೇವ ಇವರು ತಮ್ಮ ಭಾಷಣದಲ್ಲಿ ಕಾಂಗ್ರೆಸ್ಸು ಈ ವರೆಗೆ ಭಾಷಾನ್ವಯ ಪ್ರಾಂತಗಳ ಅಭಿವೃದ್ಧಿಗೆ ಮಾಡಿದ ಸಹಾಯವನ್ನು ಬಣ್ಣಿಸುತ್ತ ಸ್ವಾತಂತ್ರ್ಯ ಸಿಕ್ಕಕೂಡಲೆ ಈ ಪ್ರಶ್ನೆ ಬಹಳ ಹಗುರಾಗುವುದೆಂದು ಹೇಳಿದರು. ಅದುದರಿಂದ ಸ್ವಾತಂತ್ರ್ಯ ಸಂಪಾದನೆಈಗಲೂ ಅತ್ಯಂತ ಮಹತ್ವದ್ದಿದ್ದು ಕರ್ನಾಟಕ ಆಂಧ್ರ ಮಹಾರಾಷ್ಟ್ರದಲ್ಲಿಯ ಜನರು ಅದಕ್ಕಾಗಿ ಕಾರ್ಯತತ್ಪರರಾಗಬೇಕೆಂದು ಹೇಳಿದರು. ಸ್ವತಂತ್ರ ಮಹಾರಾಷ್ಟ್ರ ಪ್ರಾಂತದಲ್ಲಿ ಸಮಾವೇಶವಾಗತಕ್ಕ ಭಾಗಗಳ ಬಗ್ಗೆ ಹೇಳುತ್ತ ಶ್ರೀ ದೇವರು ಸದ್ಯಕ್ಕೆ ಬ್ರಿಟಿಶ ಭಾಗಗಳನ್ನಷ್ಟೇ ಸಮಾವೇಶ ಮಾಡಿಕೊಳ್ಳಲಾಗುವದೆಂದೂ ಸಂಸ್ಥಾನಗಳ ಸಮಾವೇಶ ಪ್ರಶ್ನೆಯು ಆಯಾ ಸಂಸ್ಥಾನಗಳಲ್ಲಿಯ ಜನರ ಶಕ್ತಿಯನ್ನೇ ಅವಲಂಬಿಸುತಿದೆಂದೂ ಮುಂತಾಗಿ ಹೇಳಿದರು.

### ಗೊತ್ತುವಳಿ

ಪರಿಷತ್ತಿನಲ್ಲಿ ಕೆಳಗಿನ ಮುಖ್ಯ ಗೊತ್ತುವಳಿ ಸ್ವೀಕೃತವಾಯಿತು, ಅ) ಹಿಂದುಸ್ತಾನದಲ್ಲಿ ಪ್ರಜಾಪ್ರಭುತ್ವ ರಾಜ್ಯಘಟನೆಯನ್ನು ಯಶಸ್ವಿ ಮಾಡುವುದಕ್ಕಾಗಿ ಪ್ರಾಂತ ರಚನೆಯನ್ನು ಭಾಷಾನ್ವಯ ಮಾಡುವುದು ಇಷ್ಟ ಮತ್ತು ಅವಶ್ಯಕವಾಗಿದೆಂದು ಈ ಪರಿಷತ್ತಿಗೆ ವಿಶ್ವಾಸವಿದ್ದುದರಿಂದ ಮರಾಠಿ ಮಾತಾಡುವ ಪ್ರದೇಶವನ್ನೆಲ್ಲ ಒಂದೂಗೂಡಿಸಿ ಆದಷ್ಟು ಬೇಗನೆ ಸ್ವತಂತ್ರ ಪ್ರಾಂತ ಸ್ಥಾಪನೆ ಮಾಡಬೇಕು.

ಆ) ಈಗ ಈ ಮರಾಠಿ ಪ್ರದೇಶ ಕೆಳಗಿನಂತೆ ತುಣುಕಾಗಿ ಬಿದ್ದಿವೆ.

೧) ಬ್ರಿಟಿಶ್ ಮುಂಬಯಿ ಪ್ರಾಂತದಲ್ಲಿಯ ಮರಾಠಿ ಭಾಷಾ ವಿಭಾಗ ೨) ಬ್ರಿಟಿಶ್ ವರ್‍ಹಾಡ ಮಧ್ಯಪ್ರಾಂತದಲ್ಲಿಯ ಮರಾಠಿ ಭಾಷಾವಿಭಾಗ ೩) ಈ ಎರಡು ಭಾಗಗಳಿಗೆ ಹತ್ತಿದ್ದ ಹೈದರಾಬಾದ ಮೊದಲಾದ ದೇಶೀ ಸಂಸ್ಥಾನದಲ್ಲಿಯ ಮರಾಠಿ ಭಾಷಾವಿಭಾಗ ಮತ್ತು ಪೋರ್ತುಗೀಜ ಗೋಮಾಂತಕ

ಇ) ಈ ಎಲ್ಲ ಭಾಗದಲ್ಲಿ ಬ್ರಿಟಿಶ್ ಅಧಿಕಾರದಲ್ಲಿರುವ ಭಾಗವನ್ನು ಮೊದಲು ಒಟ್ಟುಗೂಡಿಸಿ ಕೂಡಲೆ ಸ್ವತಂತ್ರ ಪ್ರಾಂತವನ್ನು ರಚಿಸಬೇಕು. ಮತ್ತು ಮುಂದೆ ಕ್ರಮಶಃ ಉಳಿದ ವಿಭಾಗ ಸಾಧ್ಯವಾಗುವಂತೆ ಆ ಮರಾಠಿ ಪ್ರಾಂತದಲ್ಲಿ ಸಮಾವೇಶ ಮಾಡಲಿಕ್ಕೆ ಬರುವದು.

ಈ) ಸ್ವತಂತ್ರ ಹಿಂದುಸ್ತಾನದ ರಾಜ್ಯಘಟನೆ ಸಿದ್ಧಪಡಿಸುವದಕ್ಕಾಗಿ ಕೂಡಲಿರುವ ಘಟನಾ ಸಮಿತಿಯಲ್ಲಿಯ ಮುಂಬಯಿ ಮತ್ತು ವರ್‍ಹಾಡ, ಮಧ್ಯಪ್ರಾಂತ ಈ ಎರಡು ಪ್ರಾಂತಗಳಲ್ಲಿ ಪ್ರತಿನಿಧಿಗಳು ಭಾಷಾನ್ವಯ ಪ್ರಾಂತ ರಚನೆಯ ಪ್ರಶ್ನೆಯನ್ನು ಉಪಸ್ಥಿತಗೊಳಿಸಿ ಈ ಎರಡೂ ಪ್ರಾಂತಗಳಲ್ಲಿ ಮರಾಠಿ ಭಾಷೆಯ ಪ್ರದೇಶದ ಮರಾಠಿ ಪ್ರಾಂತವನ್ನು ರಚಿಸುವ ಪ್ರಯತ್ನ ಮಾಡಬೇಕು.

ಅನಂತರ ಶ್ರೀ ಶಂಕರರಾವ ದೇವ ಇವರ ಅಧ್ಯಕ್ಷತೆಯಲ್ಲಿ ಸಂಯುಕ್ತ ಮಹಾರಾಷ್ಟ್ರ ಸಮಿತಿಯನ್ನು ನೇಮಿಸಲಾಯಿತು. ಡಾ. ಎಂ ಆರ್ ಜಯಕರ, ರಾವಸಾಹೇಬ ಪಟವರ್ಧನ, ಎಸ್ ಎ ಡಾಂಗೇ ಇವರು ಈ ಸಮಿತಿಯ ಸದಸ್ಯರಾಗಿರುವರು.

### ಕನ್ನಡ ಸಂಸ್ಥಾನ

ಕೃಷ್ಣಾ ನದಿಗೆ ಮಹಾಪುರ ಬಂದಿದ್ದರಿಂದ ಸಾಂಗಲಿಯಲ್ಲಿ ನೀರು ಹೊಕ್ಕಿವೆ. ಅಂಚೆ ಕಚೇರಿ ಸರಕಾರಿ ಆಸ್ಪತ್ರೆ ಹಳೆ ಅರಮನೆ ನೀರಲ್ಲಿ ನಿಂತಿವೆ. ಆದರೆ ಪ್ರಾಣಾಪಾಯವೇನೂ ಆಗಿರುವದಿಲ್ಲ. ನೀರು ಕ್ರಮೇಣ ಇಳಿಯಹತ್ತಿದೆ. ಕಂಬಾರ ವಖಾರವೊಂದು ಕುಸಿದುಬಿತ್ತು. ಸರಕಾರದವರು ನಗರ ಸಭೆಯವರು ಪರಿಹಾರ ಯೋಜನೆ ಕೈಕೊಂಡಿದ್ದಾರೆ.

ಮಲಪ್ರಭಾ ನದಿಗೆ ೨೫ ನೇ ತಾರೀಕಿನಿಂದ ನೀರು ಏರಲು ಪ್ರಾರಂಭಿಸಿ ಇಡೀ ದಿನವೆಲ್ಲ ಏರಿದ್ದರಿಂದ ರಾಮದುರ್ಗದಲ್ಲಿ ಮಹಾಪೂರು ಬಂದು ಅದೊಂದು ದ್ವೀಪವಾಗಿ ಪರಿಣಮಿಸಿದೆ. ಹೊರಗಿನ ವ್ಯವಹಾರವೆಲ್ಲ ಕಟ್ಟಾದಂತಾಗಿದೆ. ಈ ಮಹಾಪೂರದಲ್ಲಿ ೪—೬ ಬಂಡಿಗಳೂ ೨—೩ ಜನರುಗಳೂ ತೇಲಿಹೋಗಿವೆ. ಪ್ರಾಣಾಪಾಯವೇನೂ ಇಲ್ಲ. ಅವರೀಗ ನದಿಯುಳಿಯಹತ್ತಿದೆ.

# ಹಿಂದುಸ್ತಾನ

## ಮುಂಬಯಿ

ಮುಂಬಯಿಯಲ್ಲಿಯ ಬ್ಯಾಂಕ ಆಫ್ ಇಂಡಿಯಾದ ೩೦೦ ಕೆಲಸಗಾರರು ೨೯ ನೇ ತಾರೀಕಿನಿಂದ ಕೆಲಸದಿಂದ ದೂರ ಮಾಡಲ್ಪಟ್ಟಿದ್ದರಿಂದ ೧೮ ದಿನಗಳಿಂದ ನಡೆದ ಸಂಪು ಹೊಸ ಸ್ವರೂಪ ತಾಳಿದೆ. ಹೆಚ್ಚು ಸಂಬಳ ಮತ್ತು ಬೋನಸ್ಸು ಅವರು ಕೇಳಿರುವರು. ೨೯ ಕ್ಕೆ ಕೆಲಸಕ್ಕೆ ಬಾರದಿದ್ದರೆ ಕೆಲಸದಿಂದ ತೆಗೆದೊಗೆಯಲಾಗುವದೆಂದು ನೋಟೀಸು ಕೊಡಲಾಗಿತ್ತು ಅದರಂತೆ ೩೦೦ ಜನರನ್ನು ತೆಗೆಯಲಾಗಿದೆ.

ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ಸಂಸ್ಥೆಯ ವೈದ್ಯಕೀಯ ಸಲಹೆಗಾರ ಮಂಡಳದ ಕಾರ್ಯಕಾರೀ ಮಂಡಳದವರು ಡಾ ಜೀವರಾಜ ಮೇಥಾರವರ ಅಧ್ಯಕ್ಷತೆಯಲ್ಲಿ ಸೇರಿ ತ್ರಿಚಿ ಜಿಲ್ಲೆಯ ಜಮುಂಡೂರ, ಅನುರಾವತಿ ಬಳಿಯ ವರ್ಧಾ ಹಾಗು ಸೇವಾಗ್ರಾಮಗಳಲ್ಲಿ ಹೆರಿಗೆ ಕೇಂದ್ರಗಳನ್ನು ತೆರೆಯುವ ಬಗ್ಗೆ ವಿಚಾರ ಮಾಡಿದರು. ಸಿಂಗೆನೆಲ್ಲೂರ ಹೆರಿಗೆ ಕೇಂದ್ರದ ಕಾರ್ಯಕ್ಕಾಗಿ ಸಮಾಧಾನ ವ್ಯಕ್ತಮಾಡಲ್ಪಟ್ಟು ಹಾಸಿಗೆಗಳ ಸಂಖ್ಯೆ ೧೦ ಕ್ಕೇರಿಸಬೇಕೆಂದು ನಿರ್ಧರಿಸಲಾಯಿತು.

ಘಟನಾ ಸಮಿತಿಯ ತಜ್ಞರ ಸಮಿತಿಯ ಸಭೆ ಮುಂಬಯಿಯಲ್ಲ ಅಗಷ್ಟ ೧೩ ರಿಂದ ಪ್ರಾರಂಭವಾಗುವದು.

ಕಳೆದ ೮ ದಿನಗಳಿಂದ ಉಪವಾಸಹೂಡಿದ ಅಬಿದ ಅಲ್ಲಿಯವರಿಗೆ ಸಹಾನುಭೂತಿ ತೋರಲು ಮುಂಬಯಿ ಟ್ಯಾಕ್ಸಿ ಡ್ರಾಯವರರು ೩೦ನೇ ತಾರೀಕು ಒಂದು ದಿನ ಸಂಪು ಹೂಡಿದ್ದರು.

ಭಾರೀ ಮಳೆಯ ಮೂಲಕ ನರ್ಮದಾ ತಾಪಿ ಮೊದಲಾದ ನದಿಗಳಿಗೆ ಮಹಾಪೂರು ಬಂದಿದೆ ಅನೇಕ ನಗರಗಳು ನೀರಿನಲ್ಲಿ ನಿಂತಿವೆ.

ಅಂಬೇಡಕರ ಪಕ್ಷದವರು ಹೂಡಿದ ಸತ್ಯಾಗ್ರಹದಲ್ಲಿ ೧೮೦ ಜನರು ಕ್ಷಮೆ ಬೇಡಿದ್ದರಿಂದ ಅವರ ಬಿಡುಗಡೆ ಮಾಡಲಾಯಿತು. ಈಗ ಅವರು ತಮ್ಮ ನಿರೋಧವನ್ನು ನಿಲ್ಲಿಸಿದ್ದಾರೆ.

ಮುಂಬಯಿ ಮಾರಾಟ ಕರದನ್ವಯ ವ್ಯಾಪಾರಸ್ಥರ ಹೆಸರು ನೊಂದಾಯಿಸುವ ಅವಧಿಯನ್ನು ೧೫ ದಿನಗಳ ವರೆಗೆ ಮುಂದರಿಸಿದ್ದಾರೆ.

ಹಿಂದೀ ವಣಿಕ ಸಂಘದ ಹಿಂದಿನ ಅಧ್ಯಕ್ಷರೂ ಮುಂಬಯಿ ಶಾಸನಸಭೆಯ ಹಿಂದಿನ ಸದಸ್ಯರೂ ಆಗಿದ್ದ ಎಂ. ಸಿ. ಘಿಯಾ ಇವರು ವಯಸ್ಸಿನ ೬೧ ನೇ ವರ್ಷದಲ್ಲಿ ನಿಧನ ಹೊಂದಿದರು. ಇವರು ಸ್ವಪರಿಶ್ರಮದಿಂದಲೆ ಇಷ್ಟೊಂದು ಘನತೆಗೇರಿದ್ದರು.

ಮಹಾತ್ಮಾ ಗಾಂಧಿಯವರಿಗೆ ಪೋಲಿಶ್‌ಮಹಿಳೆ ಉಮಾದೇವಿಯು ಸಕಲರೂ ಸ್ವಾತಂತ್ರ್ಯಕ್ಕಾಗಿ ಎಂಬ ವಿಷಯದ ಲೇಖನಗಳ ಸಂಗ್ರಹಕವೊಂದನ್ನು ಅರ್ಪಿಸಿದಳು. ಇವಳು ಮೊದಲು ಪೋಲಿಶ್ ನಿರಾಶ್ರಿತರ ಶಿಬಿರದಲ್ಲಿದ್ದಳು ಗಾಂಧೀಜಿಯ ಶಿಷ್ಯತ್ವ ವಹಿಸಿ ಕೆಲಕಾಲ ಸೇವಾಗ್ರಾಮದಲ್ಲಿಯೂ ಇದ್ದಳು.

## ಮದ್ರಾಸ

ಮದ್ರಾಸದ ಎರಡೂ ಶಾಸನ ಸಭೆಗಳು ಶೀಘ್ರದಲ್ಲಿ ಮೌಂಟರೋಡದಲ್ಲಿಯ ಸರಕಾರೀ ಭವನಕ್ಕೆ ಸ್ಥಳಾಂತರಿಸಲ್ಪಡುವವು. ಗವರ್ನರರು ಈ ಬಗ್ಗೆ ಭವನವನ್ನು ಮುಖ್ಯ ಮಂತ್ರಿಗಳ ಕಡೆಗೆ ಕೊಟ್ಟಿದ್ದಾರೆ.

ತಿಂಗಳಿಗೆ ೩೦ ರೂಪಾಯಿಗಿಂತ ಕಡಮೆ ಸಂಬಳ ಇರುವವರ ತಾತ್ಪೂರ್ತಿಕ ಪರಿಹಾರದ ಬಗ್ಗೆ ರೇಲ್ವೆ ಮಂಡಳದವರು ಕೊಡಮಾಡಿದ ಪರಿಹಾರ ಗ್ರಾಹ್ಯವಿಲ್ಲೆಂದು ಅ. ಭಾ. ರೇಲ್ವೆ ಮಹಾಮಂಡಳದ ಸಲಹೆಗಾರ ಮಂಡಳದವರು ಸರ್ವಾನುಮತದಿಂದ ನಿರ್ಣಯಿಸಿದರು.

ಮದ್ರಾಸ ನಗರ ವೀರಶೈವ ಸಂಘದ ವಾರ್ಷಿಕ ಸಮಾರಂಭ ೨೧ಕ್ಕೆ ಜರುಗಿ ಹೊಸ ವರ್ಷಕ್ಕೆ ಸಿ.ಪಿ. ಹಳಕಟ್ಟಿಯವರು ಅಧ್ಯಕ್ಷರು, ಜಿ. ಎಂ. ಸಿದ್ದರಾಮಯ್ಯನವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು.

ಹಿಂದುಸ್ತಾನ ಸರಕಾರದವರು ಕರೆದ ಪ್ರಾಂತಿಕ ಆಹಾರ ಮಂತ್ರಿಗಳ ಪರಿಷತ್ತು ಅಗಸ್ಟ ೯–೧೦ ಕ್ಕೆ ದಿಲ್ಲಿಯಲ್ಲಿ ಸೇರಲಿದ್ದು ಮದ್ರಾಸ ಆಹಾರ ಮಂತ್ರಿಗಳಾದ ಶ್ರೀ ರಾಘವ ಮೆನನ್‌ರು ಅಲ್ಲಿಗೆ ಹೋಗಲಿದ್ದಾರೆ.

## ಮಧ್ಯಪ್ರಾಂತ

ಅಖಿಲ ಭಾರತ ಮಿಲಿಟರಿ ಅಕೌಂಟ್ಸ ಸಂಘದ ಜನರಲ್ ಕೌನ್ಸಿಲ್ಲಿನವರು ಸಭೆ ಸೇರಿ ಸರಕಾರವು ಕಾರಕೂನರ ಸಂಬಳ ಪ್ರಮಾಣ ವಿಮರ್ಶಿಸದೆ ಹೋದರೆ ೧ ತಿಂಗಳ ಸಂಬಳ ಬೋನಸ ಕೊಡದೆ ಹೋದರೆ ಕೆಲಸದಿಂದ ತೆಗೆದವರನ್ನು ಮತ್ತೆ ಸೇರಿಸಿಕೊಳ್ಳದಿದ್ದರೆ ಅಗಷ್ಟ ೧೫ ರಿಂದ ಸಂಪು ಹೂಡಲು ನಿರ್ಧರಿಸಿರುವರು.

ಗ್ರಾಂಡ ಟ್ರಂಕ ಎಕ್ಸಪ್ರೆಸ್ಸಿನಲ್ಲಿ ಝಾಂಸಿಗೆ ಹೊರಟಿದ್ದ ಮಂಗಳೂರಿನ ಮಿಸ್ ಪಾಲಿನ್ ಸಿಕ್ವೇರಾ ಎಂಬ ೨೦ ವರ್ಷದ ಯುವತಿಯ ಕುತ್ತಿಗೆ ಉರಲು ಹಾಕಲ್ಪಟ್ಟು ಕೊಲೆ ಮಾಡಲ್ಪಟ್ಟಿರುವಳೆಂದು ಸಂಶಯ ಬಂದಿದೆ. ಅವಳು ಹಿಂದೆ ಸಹಾಯಕ ಶುಶ್ರೂಷಾದಲದಲ್ಲಿದ್ದು ಸ್ತ್ರೀಯರ ಮೊದಲನೆ ವರ್ಗದ ಡಬ್ಬಿಯಲ್ಲಿ ಕುಳಿತಿದ್ದಳು ಪೋಥಕಪಳ್ಳಿ ಎಂಬ ಚಿಕ್ಕ ನಿಲ್ದಾಣದಲ್ಲಿ ಸತ್ತು ಬಿದದ್ದು ಗೊತ್ತಾಯಿತು.

## ದಿಲ್ಲಿ

ದಿಲ್ಲಿ ಪ್ರಾಂತಿಕ ವಿದ್ಯಾರ್ಥಿ ಮಹಾ ಮಂಡಳದ ಕಾರ್ಯದರ್ಶಿ ಸಂತೋಷ ಚಟರ್ಜಿಯವರು ೨೯ನೇ ತಾರೀಕು ಅಕ್ಷೇಪಾರ್ಹ ಭಾಷಣ ಮಾಡಿದ್ದಕ್ಕಾಗಿ ಹಿಂದುಸ್ತಾನ ಸಂರಕ್ಷಣ ಕಾಯದೆಯಲ್ಲಿಯ ಕಲ್ಮನನ್ವಯ ಬಂಧಿಸಲ್ಪಟ್ಟರು.

ಜವಳಿ ಗಿರಣಿಯವರು ತಮ್ಮದಲ್ಲದ ಅರಳೆಯಿಂದ ನೂಲು ತೆಗೆಯತಕ್ಕದ್ದಲ್ಲ ಮತ್ತು ತಾವು ಉತ್ಪಾದಿಸದೆ ಇದ್ದ ನೂಲನ್ನು ಸಾಯಿಜಿಂಗ ಡಾಯಿಂಗ ಮತ್ತು ಮರ್ಸರಾಯಿಜಿಂಗ ಮಾಡತಕ್ಕದ್ದಲ್ಲೆಂದು ಜವಳಿ ನಿಯಂತ್ರಣ ಕಾಯದೆಯನ್ವಯ ಅಜ್ಞೆ ಹೊರಡಿಸಲಾಗಿದೆ.

ಹಿಂದುಸ್ತಾನದ ಭಾವೀ ರಾಷ್ಟ್ರೀಯ ಸೈನ್ಯದ ತರಬೇತಿಗಾಗಿ ಡೆಹರಾಡೂನ ಕಾಲೇಜಿನಲ್ಲಿ ಅನೇಕ ಬದಲಾವಣೆಗಳನ್ನು ಮಾಡಲಾಗುತ್ತದೆಂದು ತಿಳಿಯುತ್ತದೆ.

## ಸಿಂಧ

ಸಿಂಧದ ಮಂತ್ರಿ ಮಂಡಳಕ್ಕೆ ಶಾಸನ ಸಭಾಸದಸ್ಯರ ಬೆಂಬಲವಿಲ್ಲದ್ದರಿಂದ ಮಂತ್ರಿ ಮಂಡಳಕ್ಕೆ ರಾಜೀನಾಮೆ ಕೊಡ ಹಚ್ಚಬೇಕೆಂದೂ ಇಲ್ಲದಿದ್ದರೆ ಶಾಸನ ಸಭೆ ಸೇರಿಸಿ ಸದಸ್ಯರ ಬೆಂಬಲ ಪಡೆಯಲು ಅವರಿಗೆ ವಿಧಿಸಬೇಕೆಂದೂ ವಿರೋಧಿ ಪಕ್ಷದವರು ಗವರ್ನರರಿಗೆ ಬಿನ್ನವಿಸಿದ್ದರಿಂದ ಅವರು ಸಪ್ಟಂಬರ ೫ ಕ್ಕೆ ಸಿಂಧ ಶಾಸನ ಸಭೆಯ ಅಧಿವೇಶನ ಕರೆದಿದ್ದಾರೆ. ಅಗಷ್ಟದಲ್ಲಿ ರಮಜಾನ ಹಬ್ಬವಿದ್ದದ್ದರಿಂದ ಸಭೆ ಕರೆಯುವದು ಸಾಧ್ಯವಿಲ್ಲಂತೆ.

ಕರಾಚಿ ನಗರ ಸಭೆಯ ನಿವೇಶ ಸ್ಥಾನಗಳನ್ನು ದಕ್ಷಿಣ ಅಫ್ರಿಕನ್‌ರಿಗೆ ಮಾರದಂತೆ ನಿಯಮದಲ್ಲಿ ತಿದ್ದುಪಡಿ ಮಾಡಬೇಕೆಂದು ನಿರ್ಣಯಿಸಲಾಯಿತು.

ನೇತಾಜಿ ಸುಭಾಷಚಂದ್ರ ಬೋಸ ಇವರ ಪ್ರತಿಮೆಯನ್ನು ನಿಲ್ಲಿಸುವದನ್ನು ಕರಾಚಿ ಕಾರ್ಪರೇಶನದವರು ನಿರ್ಧರಿಸಿದ್ದು ಅದಕ್ಕಾಗಿ ಸ್ಥಳವನ್ನು ನಿಶ್ಚಿತಗೊಳಿಸಿರುವರು.

## ಸರಹದ್ದ

ಕಳೆದ ರವಿವಾರ ದಿವಸ ಅಬೊಟ್ಟಾಬಾದದಲ್ಲಿ ದಂಗೆ ಉಂಟಾಗಿ ಲೂಟಿಕೊಳಿ, ಮೊದಲಾದವುಗಳು ಸಂಭವಿಸಿದವು ಶಾಂತತೆಗಾಗಿ ಸೈನ್ಯವನ್ನು ಕರೆಯಲಾಗಿತ್ತು. ದಂಗೆಯಲ್ಲಿ ಇಬ್ಬರು ಗುಂಡಿನಿಂದ ಸತ್ತಿರುವರೆಂದೂ ೮ ಜನ ಗಾಯಗೊಂಡಿರುವರೆಂದೂ ತಿಳಿಯುತ್ತದೆ.

---

ರಾಷ್ಟ್ರದ ಆರೋಗ್ಯವನ್ನು ಕಾಪಾಡುವ ನಿಮಿತ್ತ ಬಾಲಕರು ಬೀಡಿ ಸೇದದಂತೆ ಪ್ರತಿಬಂಧಿಸುವ ಬಗ್ಗೆ ಮದ್ರಾಸ ಸರಕಾರದವರು ವಿಚಾರ ವಿನಿಮಯ ನಡೆಸಿರುವರೆಂದು ತಿಳಿಯುತ್ತದೆ

ಮದ್ರಾಸ ಸರಕಾರದವರು ತಮ್ಮ ಪ್ರಾಂತದಲ್ಲಿ ಕಳೆದ ಹತ್ತು ವಾರಗಳಲ್ಲಿ ೨೫೦೦೦ ಟನ್ ಅಕ್ಕಿ ಖರೀದಿ ಮಾಡಿದ್ದಾರೆ ಅಕ್ಟೋಬರ ತಿಂಗಳೊಳಗಾಗಿ ಮೂರು ಲಕ್ಷ ಟನ್ ಸಂಗ್ರಹಿಸಬಹುದೆಂದು ಅಂದಾಜ ಮಾಡಿರುವರು.

## ಸಂಯುಕ್ತಪ್ರಾಂತ

ಚಿವಕಿ ಅರ್ಡಿನನ್ಸ ಡಿಪೋದಲ್ಲಿಯ ಕೂಲಿಕಾರರ ಅಸಂತೋಷ ಜಾತೀಯ ದಂಗೆಗೆ ಎಳಿಸದ್ದರಿಂದ ಕಾಂಗ್ರೆಸ ಮಂತ್ರಿ ಮಂಡಳದವರು ದಂಗೆಗಾರರ ಮೇಲೆ ಸಾಮೂಹಿಕ ದಂಡ ಹೇರುವದು, ಕಿಡಿಗೇಡಿಗಳ ಯಾದಿ ತಯಾರಿಸಿ ಗಲಭೆ ಉದ್ಭವಿಸಿದಲ್ಲಿ ಅವರನ್ನು ಬಂಧಿಸುವದು ರಕ್ಷಣ ಸಮಿತಿಗಳನ್ನು ಸ್ಥಾಪಿಸುವದು ಮೊದಲಾದ ಉಪಾಯಗಳನ್ನು ಕೈಕೊಂಡಿದ್ದಾರೆ.

ಕಾನಪುರ ನಗರಸಭೆಯ ೧೦೦೦ ಭಂಗೀ ಜನರು ೨೯ರಿಂದ ಸಂಪು ಹೂಡಿದ್ದಾರೆ. ನಗರ ಸಭೆಯವರು ಅವರ ಬೇಡಿಕೆಗಳನ್ನು ಮನ್ನಿಸದಿದ್ದುದೆ ಕಾರಣ. ಸಂಬಳ ಏರಿಸಬೇಕು. ಸಾಕಷ್ಟು ತುಟ್ಟಿಭತ್ತೆ ಕೊಡಬೇಕು ವಾಸಕ್ಕೆ ಸ್ಥಳ ಕೊಡಬೇಕು. ಔಷಧೋಪಚಾರದ ವ್ಯವಸ್ಥೆ ಮಾಡಬೇಕು ಮೊದಲಾದವು ಅವರ ಬೇಡಿಕೆಗಳು

ಗೋರಖಪುರದಿಂದ ಹೊರಟ ಪ್ಯಾಸೆಂಜರ ಗಾಡಿ ೨೮ ನೇ ರಾತ್ರಿ ೧೧ ಗಂಟೆಗೆ ಭಟನಿ ರೇಲ್ವೆ ಜಂಗಶನದಲ್ಲಿ ನಿಂತುಕೊಂಡಿದ್ದ ಕಾಶೀವಾಡ ಪ್ಯಾಸೆಂಜರ ಗಾಡಿಗೆ ಹೋಗಿ ಹಾಯ್ದುದ್ದರಿಂದ ೨೩ ಪ್ರವಾಸಿಕರು ಮರಣ ಹೊಂದಿದರು. ಗಾರ್ಡನ ಡಬ್ಬಿಯೊಳಗೊಂಡು ಮೂರು ಡಬ್ಬಿಗಳು ಪುಡಿ ಪುಡಿಯಾಗಿರುವವು

ಸಂಯುಕ್ತಪ್ರಾಂತದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಬಳವನ್ನು ೧೯ ರೂ. ಗಳಿಂದ ೨೫ ಕ್ಕೇರಿಸಲಾಗುವದೆಂದು ಸಚಿವರಾದ ಶ್ರೀ ಸಂಪೂರ್ಣಾನಂದರು ಶಾಸನ ಸಭೆಯ ಚರ್ಚೆಯ ಕಾಲಕ್ಕೆ ಹೇಳಿದರು.

ಬನಾರಸ ಹಿಂದೂ ವಿಶ್ವವಿದ್ಯಾಲಯದಲ್ಲಿ ಹಿಂದೀ ಭಾಷೆಯ ಮುಖಾಂತರ ಶಿಕ್ಷಣ ಪಡೆವ ಪ್ರತ್ಯೇಕ ಏರ್ಪಾಡು ಮಾಡಿರುವರು.

ರಿಝರ್ವ ಬ್ಯಾಂಕಿನ ಕಾನಪುರ ಶಾಖೆಯಲ್ಲಿಯ ೪೦೦೦ ರೂಪಾಯಿ ನೋಟುಗಳು ಹೇಗೋ ಮಾಯವಾಗವೆಂದು ಪೋಲೀಸರಿಗೆ ವರದಿ ಮಾಡಲಾಗಿದೆ.

## ಬಿಹಾರ

ಬಿಹಾರ ಮತ್ತು ಓಡಿಸಾ ಪೋಸ್ಟ ಮಾಸ್ತರ ಜನರಲ್ ಕಚೇರಿಯಲ್ಲಿಯ ಅಧಿಕಾರಿಗಳು ೨೯ ರಿಂದ ಸಂಪು ಹೂಡಿದ್ದರಿಂದ ಅಂಚೆ ವ್ಯವಹಾರ ಸಂಪೂರ್ಣ ಕಟ್ಟಾಗಿದೆ. ಮಂತ್ರಿವರ್ಯ ಸಯ್ಯದ ಮಹಮ್ಮದರ ಮಗನನ್ನೊಳಗೊಂಡು ಹಲವರನ್ನು ಸೆರೆ ಹಿಡಿದು ಜಾಮೀನ ಮೇಲೆ ಬಿಟ್ಟಿದ್ದಾರೆ. ಪೋಲೀಸರು ನಿರೋಧಿಸುವದಲ್ಲಿ ಕೈಹಾಕುವದಿಲ್ಲೆಂದು ಹೇಳಿದ್ದರಿಂದ ಪರಿಸ್ಥಿತಿ ಸ್ವಲ್ಪ ತಿಳಿಯಾಗಿದೆ ಅಲ್ಲಿ ಆರ್. ಎಂ. ಎಸ್. ಕೆಲಸಗಾರರು ಸಂಪು ಹೂಡಿದ್ದಾರೆ.

## ಓಡಿಸಾ

ಭದ್ರಕದಲ್ಲಿ ಕಳೆದ ಬುಧವಾರ ದಿವಸ ಹಿಂದುಗಳ ಮೆರವಣಿಗೆಯೊಂದು ಹಾಯಕೋರ್ಟ ನಿರ್ಣಯ ಪ್ರಕಾರ ವಾದ್ಯದೊಂದಿಗೆ ಮಸೀದೆ ಮುಂದೆ ಹಾಯ್ದು ಹೋಗುತ್ತಿರುವಾಗ ದಂಗೆ ಸಂಭವಿಸಿದ್ದರಿಂದ ಪೋಲೀಸರು ಗೋಳೀಬಾರು ಮಾಡಬೇಕಾಯಿತು ಗೋಳೀಬಾರಿನಲ್ಲಿ ೭ ಜನ ಗಾಯಗೊಂಡಿದ್ದು ಒಬ್ಬನು ಹಿಂದುಗಡೆ ಅಸ್ಪತ್ರೆಯಲ್ಲಿ ಸತ್ತನು.

---

ಈ ಮೊದಲು ಊಹಿಸಿದಂತೆ ಸರ್ ಮಿರ್ಜಾ ಇಸ್ಮಾಯಿಲರು ಹೈದ್ರಾಬಾದ ನಿಜಾಂ ಪ್ರಭುಗಳ ಕಾರ್ಯಕಾರೀ ಮಂಡಳದ ಅಧ್ಯಕ್ಷರಾಗಿ ನಿಯಮಿಸಲ್ಪಟ್ಟಿದ್ದಾರೆಂದು ಅಧಿಕೃತವಾಗಿ ಪ್ರಕಟಿಸಲಾಗಿದೆ.

* *

ಕುಂದಗೋಳದಲ್ಲಿ ಶ್ರೀ ಬ್ರಹ್ಮದೇವರ ಜಾತ್ರೆಯ ನಿಮಿತ್ತವಾಗಿ ಜರಗಿದ ಕುಸ್ತಿಗಳ ಕಾರ್ಯಕ್ರಮಕ್ಕೆ ಕಾಣಿಕೆ ವಂತಿಗೆ ಹಾಗು ಹಿಂದಿನ ಉಳಿಕೆ ಸಹಿತ ೭೭೧–೧–೦ ಕೂಡಿತ್ತು ಕುಸ್ತಿಗಳ ಸಲುವಾಗಿ ೫೧೩–೧೪–೬ ವೆಚ್ಚವಾಗಿದ್ದು ಉಳಿದ ಹಣ ಶ್ರೀ ಫಕೀರಪ್ಪ ಕೊಪ್ಪಳ ಇವರ ಕಡೆಗೆ ಬಡ್ಡಿಯಿಂದ ಟ್ಟಿದೆ.

## ಕಾಶ್ಮೀರದಲ್ಲಿ ಜವಾಹರರು

ಶೇಖ ಅಬ್ದುಲ್ಲಾರ ಖಟ್ಲೆಯನ್ನೀಕ್ಷಿಸಲು ಪಂಡಿತ ಜವಾಹರಲಾಲರು ಕಾಶ್ಮೀರಕ್ಕೆ ಹೋಗಿದ್ದರು. ಶ್ರೀನಗರದಲ್ಲಿ ಶೇಖ ಅಬ್ದುಲ್ಲಾರ ಭೆಟ್ಟಿ ತೆಗೆದುಕೊಂಡು ೨ ಗಂಟೆ ಅವರೊಡನೆ ಮಾತುಕತೆ[illegible]ದರು. ಶ್ರೀನಗರದ ಸೆಶನ್ಸ ಜಜ್ಜರಲ್ಲಿ ನಡೆದ ಅವರ ಖಟ್ಲೆಯ ಕಾಲಕ್ಕೆ ಜವಾಹರರು ಹಾಜರಿದ್ದರು.

ವಿಚಾರಣೆಯ ಕಾಲಕ್ಕೆ ಶ್ರೀನಗರ ಮುನಸಿಪಾಲಟಿಯ ಅಧ್ಯಕ್ಷರೂ ಇಂಜನಿಯರರೂ ಶೇಖ ಅಬ್ದುಲ್ಲಾರ ಬಂಧನದ ನಂತರ ಜನರು ದಂಗೆ ಹಾಕಿ ಪೂಲುಗಳಿಗೂ ಕೆಲವು ಕಟ್ಟಡಗಳಿಗೂ ಹಾನಿ ಮಾಡಿದರೆಂದು ಹೇಳಿದರು. ಟೆಲಿಫೋನ ಕೇಬಲುಗಳನ್ನು ಜನರು ಕತ್ತರಿಸಿದರೆಂದು ಟೆಲಿಫೋನ ಇನಸ್ಪೆಕ್ಟರರು ಹೇಳಿದರು. ಆಗ ಅಸಫಅಲ್ಲಿಯವರೆದ್ದು ಈ ಸಾಕ್ಷಿಗಳೆಲ್ಲ ಅಸಂಬದ್ಧವಾಗಿವೆ. ಇದರಿಂದ ಸರಕಾರವು ದಬ್ಬಾಳಿಕೆ ನಡೆಸಿತೆಂದು ವ್ಯಕ್ತವಾಗುತ್ತದೆ. ಆದರೆ ಸರಕಾರವೀಗ ಶೇಖ ಅಬ್ದುಲ್ಲಾರ ರಾಜದ್ರೋಹದ ವಿಚಾರಣೆ ನಡೆಸಿದೆಂಬುದನ್ನೂ ಮರೆಯಬಾರದೆಂದು ಹೇಳಿದರು.

ಪಂಡಿತ ಜವಾಹರಲಾಲರು ೨೮ ನೇ ತಾರೀಖು ಮುಂಜಾನೆ ರಾಮಪೂರ ಮತ್ತು ಅನಂತನಾಗಗಳಿಗೆ ಭೆಟ್ಟಿ ಕೊಟ್ಟರು. ಇತ್ತೀಚಿನ ಗಲಭೆಗಳಲ್ಲಿ ಈ ಊರುಗಳಲ್ಲಿ ಗೋಳೀಬಾರು ಆಗಿತ್ತು ಅನಂತನಾಗಕ್ಕೆ ಹೋಗುವಾಗ ಅವರು ರಾಷ್ಟ್ರೀಯ [illegible]ತ್ರಿನ ಭದ್ರತಾಸ್ಥಾನವಾದ ಪ್ರಜಬಿಹಾರವನ್ನು ಸಂದರ್ಶಿಸಿದರು. ಮಿಶನ ಅಸ್ಪತ್ರೆ ಹಾಗು ಗೋಳೀಬಾರಿನ ಸ್ಥಳಕ್ಕೂ ಅವರು ಭೆಟ್ಟಿಕೊಟ್ಟರು. ಮತ್ತೊಮ್ಮೆ ಶೇಖ ಅಬ್ದುಲ್ಲಾರ ಭೆಟ್ಟಿ ತೆಗೆದುಕೊಂಡು ಜವಾಹರರು ಮರಳಿದರು.

ಕಾಶ್ಮೀರದಿಂದ ಮರಳಿದ ನಂತರ ಜವಾಹರಲಾಲರು ದಿಲ್ಲಿಯಿಂದ ಪ್ರಕಟನೆಯೊಂದನ್ನು ಹೊರಡಿಸಿ ಶಿಸ್ತು ಹಾಗು ಸರಿಯಾದ ಮಾರ್ಗದಿಂದ ಬಲ ಬೆಳಿಸಿಕೊಳ್ಳಬೇಕೆಂದು ಪ್ರಜೆಗಳಿಗೆ ಬಿನ್ನವಿಸಿಕೊಂಡಿದ್ದಾರೆ. ಪ್ರಜಾ ಸಭೆಯ ಚುನಾವಣೆಗಳು ಇನ್ನು ಎರಡೂವರೆ ತಿಂಗಳಗಳಲ್ಲಿ ನಡೆಯಲಿದ್ದು ರಾಷ್ಟ್ರೀಯ ಪರಿಷತ್ತು ಚುನಾವಣೆಯಲ್ಲಿ ತನ್ನ ಹುರಿಯಾಳುಗಳನ್ನು ನಿಲ್ಲಿಸಿ ಸ್ವಾತಂತ್ರ್ಯ ಚಳವಳಿಯಲ್ಲಿ ಜನತೆಯ ಬೆಂಬಲ ತನಗಿದೆಂದು ತೋರಿಸುವದೆಂದು ಅವರು ಆಸೆ ಪ್ರದರ್ಶಿಸಿದ್ದಾರೆ. ಈಗಿನಿಂದಲೇ ಆ ಬಗ್ಗೆ ಪ್ರಯತ್ನ ಮಾಡಿದರೆ ಯಶಸ್ಸು ಸಿಕ್ಕದೆ ಹೋಗದೆಂದೂ ಅವರು ಆಸೆ ಪ್ರದರ್ಶಿಸಿರುವರು. ಕೊನೆಯಲ್ಲಿ ಕಾಶ್ಮೀರ ಜನರ ಭವಿತವ್ಯ ಉಜ್ವಲವಾಗಲಿ ಕಾಶ್ಮೀರದಲ್ಲಿಯ ನಾವೆಲ್ಲರು ಹಾಗು ಹಿಂದುಸ್ತಾನದಲ್ಲಿಯ ಉಳಿದ ಭಾರತೀಯರು ನಮ್ಮ ಹೃದಯದ ಇಚ್ಛೆಯನ್ನು ಅಂದರೆ ಸ್ವತಂತ್ರ ಹಿಂದುಸ್ತಾನದಲ್ಲಿ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವಾ ಎಂದ ಜವಾಹರರು ಪ್ರಕಟನೆ ಮುಗಿಸಿರುವರು.

## ಭೋವಾಲ ಸನ್ಯಾಸಿ ಪ್ರಕರಣ

ಪ್ರೀವಿ ಕೌನ್ಸಿಲ್ಲಿನ ನ್ಯಾಯ ಮಂಡಲದವರು ಭೋವಾಲ ಸನ್ಯಾಸಿಯ ಖಟ್ಲೆಯಲ್ಲಿ ಸನ್ಯಾಸಿಯಂತೆ ತೀರ್ಪು ಕೊಟ್ಟಿದ್ದಾರೆ. ಬಂಗಾಲ ಪ್ರಾಂತದ ಭೋವಾಲದ ಜಮೀನದಾರನ ದ್ವಿತೀಯ ಪುತ್ರ ರಮೇಂದ್ರ ನಾರಾಯಣನ ಸಂಬಂಧ ಈ ವಿಚಾರಣೆ ನಡೆದಿತ್ತು. ಅವನು ಸತ್ತಿರುವನೆಂದೂ ಅವನ ದಹನ ಮಾಡಲಾಗಿತ್ತೆಂದೂ ಹೆಂಡತಿ ವಿಭಾವತಿಯ ಹೇಳಿಕೆ. ಆದರೆ ರಮೇಂದ್ರನು ಹನ್ನೆರಡು ವರ್ಷಗಳ ನಂತರ ತನ್ನ ಹಳ್ಳಿಗೆ ಬಂದಾಗ ವಿಭಾವತಿಯು ಅವನು ತನ್ನ ಗಂಡನಲ್ಲೆಂದು ನಿರಾಕರಿಸಿದಳು. ಅವನ ಬಂಧುಗಳೂ ಅವನಿಗೆ ಆಸ್ತಿಯಲ್ಲಿ ಪಾಲು ಕೊಡಲಿಲ್ಲ. ಆಗ ರಮೇಂದ್ರನು ಖಟ್ಲೆ ಹೂಡಿದನು. ಇಲ್ಲಿಯ ಮೂರೂ ಕೋರ್ಟುಗಳಲ್ಲಿ ರಮೇಂದ್ರನಂತೆಯೆ ನಿರ್ಣಯವಾಗಿತ್ತು. ವಿಭಾವತಿ ಪ್ರಿವಿಕೌನ್ಸಿಲ್ಲಿಗೆ ಅಪೀಲ ಮಾಡಿದ್ದಳು. ಅಲ್ಲಿಯೂ ಮೇಲೆ ಹೇಳಿದಂತೆ ರಮೇಂದ್ರನಂತೆ ನಿರ್ಣಯವಾಯಿತು. ಭೋವಾಲ ಜಮೀನದಾರನ ಆಸ್ತಿ ೧೦೦ ಚದುರ ಮೈಲುಗಳಷ್ಟಿದ್ದು ಅದು ಲಕ್ಷ ರೂಪಾಯಿಗಳಷ್ಟು ವಾರ್ಷಿಕ ಉತ್ಪನ್ನವಿದೆ. ರಮೇಂದ್ರನು ೧೯೦೯ ರಲ್ಲಿ ದಾರ್ಜಿಲಿಂಗದಲ್ಲಿ ಸತ್ತನೆಂದು ಕೋರ್ಟಿನಲ್ಲಿ ಸಾಕ್ಷಿ ಹೇಳಲಾಗಿತ್ತು– ಸನ್ಯಾಸಿಗಳ ಜೊತೆಯಲ್ಲಿ ರಮೇಂದ್ರನು ೧೨ ವರ್ಷ ಸಂಚರಿಸಿದ್ದನು.





ಬೆಂಗಳೂರು ನಗರ ಕಾಂಗ್ರೆಸ್ ಸಮಿತಿ ಮತ್ತು ಬೆಂಗಳೂರು ವಿದ್ಯಾರ್ಥಿ ಕಾಂಗ್ರೆಸ್ ಇವುಗಳ ಆಶ್ರಯದಲ್ಲಿ ತಾ. ೨೫ಕ್ಕೆ ಬೆಂಗಳೂರು ಗಾಂಧೀ ಬಜಾರಿನಲ್ಲಿ ಸಾರ್ವಜನಿಕ ಸಭೆಯೊಂದು ಜರಗಿತು. ಶ್ರೀ ರಂಗರಾವ ದಿವಾಕರ, ಡಾ. ಎನ್. ಎಸ್. ಹರ್ಡಿಕರ್ ಮುಂಬಯಿ ಶಾಸನ ಸಭಾ ಸದಸ್ಯರಾದ ಶ್ರೀ ಮಗನಲಾಲ ಶಹಾ ಇವರು ಭಾಷಣ ಮಾಡಿದರು. ಶ್ರೀ ದಿವಾಕರರು ಕರ್ನಾಟಕ ಏಕೀಕರಣ ಹಾಗೂ ಘಟನಾ ಸಮಿತಿಯ ಬಗ್ಗೆ ಮಾತಾಡಿ ಘಟನಾ ಸಮಿತಿ ಸೇರುವದರೊಳಗಾಗಿ ಏಕೀಕರಣದ ಪ್ರಶ್ನೆ ತೀರ್ಮಾನವಾಗಲೆಂದು ತಿಳಿಸಿದರು. ಶ್ರೀ ಶಹಾ ಅವರು ಮೈಸೂರು ಸರಕಾರದ ಆಡಳಿತದ ನೀತಿಯನ್ನು ಖಂಡಿಸಿ ಜವಾಬ್ದಾರ ಸರಕಾರಕ್ಕಾಗಿ ಎಡೆಬಿಡದೆ ಹೋರಾಟ ನಡೆಸಬೇಕೆಂದರು. ಡಾ. ಹರ್ಡೀಕರರು ಸೇವಾದಲದ ಅವಶ್ಯಕತೆಯನ್ನು ಪ್ರತಿಪಾದಿಸಿದರು.

AC 88. –8

# “ಬರಗಾಲವನ್ನು ತಪ್ಪಿಸಿಕೊಳ್ಳಲು ಎಲ್ಲರೂ ಕೆಲಸ ಮಾಡತಕ್ಕದ್ದು”

—ಶ್ರೀಮತಿ ನಾಯುಡು

ಫೆಬ್ರುವರಿ ೧೩ಕ್ಕೆ ಶ್ರೀಮತಿ ನಾಯಡು ಅವರು ಹೈದರಾಬಾದ (ಡೆಕ್ಕನ)ದಲ್ಲಿ ಮಾತನಾಡುತ್ತ, “ಸದ್ಯದ ಪ್ರಸಂಗದಲ್ಲಿ ಬಳಲುವವರಿಗೆ ನೀವು ಮುಂದೆಬಂದು ಸಹಾಯಮಾಡುವಿರೋ ಅಥವಾ ಇಲ್ಲವೋ? ಭಾರತದ ದೆಸೆಯು ಎಲ್ಲರಿಗೂ ಒಂದೇ; ಅದು ಅಭಿನ್ನವಾಗಿದೆ. ಆದ್ದರಿಂದ ಈಗ ಒದಗಿದ ಸಂಕಟ ಸಮಯದಲ್ಲಿ, ದೊಡ್ಡ ಸಂಸ್ಥಾನಗಳನ್ನು ಮತ್ತು ರಾಜ್ಯಗಳನ್ನು ಆಳುವ ಬಲಶಾಲಿಗಳಾದ ರಾಜಕುಮಾರರಾಗಲಿ ಇಲ್ಲವೆ ಗುಡಿಸಲುಗಳಲ್ಲಿ ಬಡವಾಗಿರುವ ಮಕ್ಕಳನ್ನು ಮತ್ತು ಉಪವಾಸದಿಂದ ಸಾಯುವ ಹೆಂಡಂದಿರನ್ನು ರಕ್ಷಣೆಮಾಡುವ ಕೆಲಸದಲ್ಲಿ ತೊಡಗಿದ ಹಸಿದ ಒಕ್ಕಲಿಗರಾಗಲಿ—ಯಾರಾದರೂ ಸಹ ತಮ್ಮ ಕರ್ತವ್ಯವನ್ನು ಮಾಡಲು ತಪ್ಪುವಂತಿಲ್ಲ. ಹಸಿದವರ ಹೊಟ್ಟೆಗಳನ್ನು ತುಂಬುವುದಕ್ಕೆ ನೆರವಾಗುವುದರಲ್ಲಿ ದೊಡ್ಡವರು ಸಣ್ಣವರು ಎಂಬ ಭೇದ ಉಳಿಯಲಾರದು,” ಹೀಗೆಂದು ಹೇಳಿದರು.

## ನಮ್ಮ ಪ್ರತಿಜ್ಞೆ ಮತ್ತು ಬಿನ್ನಹ

ಕೊರತೆಯ ಭಾಗಗಳಲ್ಲಿರುವವರಿಗೆ ನಾವು ಸಂಪೂರ್ಣ ಬೆಂಬಲ ನೀಡುವ ಬಗ್ಗೆ ಪ್ರತಿಜ್ಞೆ ಮಾಡುತ್ತೇವೆ. ದೇಶದ ಯಾವತ್ತೂ ಸಾಧನ ಸಾಮಗ್ರಿಯನ್ನು ಒಂದುಗೂಡಿಸಿ ಅವರಿಗೆ ತ್ವರಿತವಾಗಿ ನೆರವನ್ನು ನೀಡಲಾಗುತ್ತಿದೆ. ಅವರಿಗಿರುವ ಆಹಾರದ ಕೊರತೆಯಲ್ಲಿ ದೇಶದ ಉಳಿದ ಭಾಗವು ಪಾಲು ವಹಿಸುವದಲ್ಲದೆ ಸಮಪಾಲು ವಹಿಸುವದು. ಪ್ರತಿಯೊಬ್ಬನಿಗೆ ಯೋಗ್ಯ ಪ್ರಮಾಣದಲ್ಲಿ ಆಹಾರವು ದೊರೆಯುವಂತೆ ಮಾಡುವದಕ್ಕಾಗಿ ಶಿದಾ ಪದ್ಧತಿಯನ್ನು ವಿಸ್ತರಿಸಲಾಗುತ್ತಿದೆ. ಬೆಲೆ ನಿಯಂತ್ರಣವನ್ನು ತಪ್ಪದೆ ಸಾಗಿಸಲಾಗುವುದು. ಶಾಂತತೆ ಮತ್ತು ಆತ್ಮ ವಿಶ್ವಾಸದಿಂದ ನಡೆದುಕೊಳ್ಳಿರಿ. ನಿಮಗೆ ಅವಶ್ಯವಿರುವದಕ್ಕಿಂತ ಹೆಚ್ಚಿಗೆ ಕೊಂಡುಕೊಳ್ಳಬೇಡಿರಿ. ಲಾಭಬಡಕರೊಡನೆ ಯಾವದೇ ತರದ ಸಂಬಂಧವನ್ನಿಟ್ಟುಕೊಳ್ಳಬೇಡಿರಿ.

ಹೆಚ್ಚುಳಿದ ಭಾಗಗಳಲ್ಲಿರುವವರಿಗೆ ಸಂಪೂರ್ಣ ಸಹಾಯವನ್ನು ಒದಗಿಸಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ. ನಿಮ್ಮಲ್ಲಿ ಹೆಚ್ಚಾಗಿ ಇರುವ ಕಾಳನ್ನು ನೀವು ಕೊಟ್ಟುಬಿಡಬೇಕಾದ್ದರೂ ನಿಮಗೆ ಸಾಕಷ್ಟು ಕಾಳು ಉಳಿಯುವುದು. ನಿಮ್ಮ ಪಟ್ಟಣದಲ್ಲಿ ಶಿದಾ ಕ್ರಮವನ್ನು ಬಳಕೆಯಲ್ಲಿ ತಂದರೆ ನಿಮ್ಮ ದೇಶಬಾಂಧವರಿಗೆ ನೆರವಾಗುವುದಕ್ಕಾಗಿ ಹೀಗೆ ಮಾಡಲಾಗಿದೆಯೆಂದು ನೆನಪಿನಲ್ಲಿಡಿರಿ. ಇಷ್ಟೆಲ್ಲ ಆಗಿಯೂ ನಿಮ್ಮ ಹತ್ತಿರ ಸಾಕಷ್ಟು ಉಳಿಯುವುದು. ಸ್ವಲ್ಪಾದರೂ ಕೂಡಿಹಾಕಿ ಇಡಬೇಡಿರಿ. ಅಧಿಕಾರಿಗಳೊಡನೆ ಸಹಕರಿಸಿರಿ.

## ಆಹಾರದ ಕೊರತೆಯನ್ನು ಹೋಗಲಾಡಿಸಿರಿ

ಹಿಮ್ಮನಸ್ಸಿನಿಂದ ದುಡಿಯಿರಿ ಎಲ್ಲರೂ ಪಾಲುಗಾರರಾಗಿರಿ

## ವ್ಯಾಪಾರಿಗಳಿಗೆ ಮತ್ತು ಬೆಳೆಯುವವರಿಗೆ ಸಂದೇಶ

ನಿಮಗೆ ಶಕ್ಯವಿದ್ದಷ್ಟು ಕಾಳನ್ನೆಲ್ಲ ಹೊರಗೆಡವಿರಿ; ನೀವು ಕೂಡಿಡುವ ಪ್ರತಿಯೊಂದು ಮಣ ಕಾಳು ಒಬ್ಬ ದೇಶಬಾಂಧವನ ಮರಣಕ್ಕೆ ಕಾರಣವಾಗುವುದು. ನಿಯಂತ್ರಿತ ಬೆಲೆಗಳಿಗಷ್ಟೇ ಮಾರಿರಿ–ಅವು ನಿಮಗೆ ಹಾಗೂ ಗ್ರಾಹಕರಿಗೆ ಇಬ್ಬರಿಗೂ ಯೋಗ್ಯವಾಗಿವೆ. ಎರಡನೇಯವರಿಗೆ ದುಃಖ ಕೊಟ್ಟು ಹಣ ಗಳಿಸುವುದು ಪಾಪವೆಂದು ತಿಳಿಯತಕ್ಕದ್ದು.

ಲಾಭಬಡಕರನ್ನು ಮತ್ತು ಕಳ್ಳಪೇಟೆಗಾರರನ್ನು ತಮ್ಮ ಯಾವತ್ತೂ ಶಕ್ತಿಯನ್ನು ಉಪಯೋಗಿಸಿ ಹತ್ತಿಕ್ಕಬೇಕೆಂದು ಸರಕಾರ ಹಾಗೂ ಜನತೆಯು ನಿಶ್ಚಯಿಸಿರುತ್ತದೆ. ಕಳ್ಳಪೇಟೆಯನ್ನು ತಪ್ಪಿಸಿರಿ; ಅದು ಅಪರಾಧವಾಗಿದೆ.

ಹಿಂದುಸ್ತಾನ ಸರಕಾರದ ಆಹಾರ ಖಾತೆ, ಹೊಸದಿಲ್ಲಿ, ಇವರ ಪ್ರಕಟಣೆ

# ಮುಂಬಯಿ ಶಾಸನ ಸಭೆ

## ಪುರವಣಿ ಬೇಡಿಕೆಗಳೆಲ್ಲ ಮಂಜೂರಾದವು

### ಸಪ್ಟಂಬರ ೨ ರ ವರೆಗೆ ಮುಂದರಿಯಿತು

ಮುಂಬಯಿ ಶಾಸನ ಸಭೆ ಈ ಮೊದಲು ಬರೆದಂತೆ ೨೭ ನೇ ತಾರೀಕಿನ ದಿನ ಮುಂದರಿಯಿತು. ಎಲ್ಲ ಪುರವಣಿ ಬೇಡಿಕೆಗಳು ಮಾನ್ಯವಾದವು. ಗೃಹಮಂತ್ರಿಗಳಾದ ಮುರಾರಜಿ ದೇಸಾಯರು ಪೋಲೀಸರ ಸಂಬಂಧವಲ್ಲಿ ಕೇಳಲಾದ ಪುರವಣಿ ಬೇಡಿಕೆಯ ಸಂಬಂಧದಲ್ಲಿ ವಿರುದ್ಧ ಪಕ್ಷದವರು ಚರ್ಚೆ ಉಪಸ್ಥಿತ ಮಾಡಿದರು. ಲೀಗಿನ ಸದಸ್ಯರಾದ ಎ. ಎಸ್ ಶೇಖರು ಬೇಡಿಕೆಯನ್ನು ವಿರೋಧಿಸುತ್ತ ಕಾಂಗ್ರೆಸ್ಸು ಅಧಿಕಾರ ವಹಿಸಿದಂದಿನಿಂದ ಜಿಲ್ಹಾ ಪೋಲೀಸರು ಸ್ಥಳಿಕ ಕಾಂಗ್ರೆಸ ಧುರೀಣರ ಗೊಂಬೆಗಳಾಗಿ ವರ್ತಿಸುತಿರುವರೆಂದೂ ಅಹಮದಾಬಾದದಲ್ಲಿ ಕಸಗೂಡಿಸುವವರ ಸಂಪನ್ನು ಅವರೇ ಮುರಿದರೆಂದೂ ಸಿ ಆಯ ಡಿ ಗಳ ಕಣ್ಣು ಲೀಗಿನವರ ಮೇಲೆ ಬಹಳಿದೆಂದೂ ಮುಂತಾಗಿ ಹೇಳಿದರು. ದಲಿತ ವರ್ಗದ ಸ್ತ್ರೀ ಸತ್ಯಾಗ್ರಹಿಗಳನ್ನು ಅಧಿಕಾರಿಗಳು ದಬ್ಬಿ ಅವಮಾನಗೊಳಿಸಿದರೆಂದು ಎಸ್. ಎಂ. ಪಸನರು ಆರೋಪಿಸಿದರು. ಗೃಹ ಮಂತ್ರಿಗಳು ಉತ್ತರ ಕೊಡುತ್ತ ಪೋಲೀಸರ ಮೇಲಿನ ಆರೋಪ ಅಲ್ಲಗಳೆದು ಹೊಣೆಗೇಡಿತನದ ಟೀಕೆ ಮಾಡುವದನ್ನು ಸರಕಾರ ಸಹಿಸದೆಂದು ಮುಂತಾಗಿ ಹೇಳಿದರು. ದಲಿತ ವರ್ಗದ ಸ್ತ್ರೀಯರನ್ನು ಕೆಟ್ಟ ರೀತಿಯಿಂದ ನಡೆಸಿಕೊಂಡ ಬಗ್ಗೆ ಸತ್ಯಾಗ್ರಹಿಗಳಿಂದ ಯಾವದೇ ಬಗೆಯ ತಕರಾರು ಬಂದಿಲ್ಲೆಂದೂ ಹೇಳಿದರು. ಅಹಮದಾಬಾದದಲ್ಲಿ ಸಂಪುಗಾರರು ಹಿಂಸೆಗೆಳಿಸಿದ ಬಳಿಕ ಪೋಲೀಸರು ಕ್ರಮ ತೆಗೆದುಕೊಂಡರೆಂದು ಹೇಳಿದರು. ಲೀಗಿನವರ ಚಟುವಟಿಕೆಗಳ ಮೇಲೆ ಪೋಲೀಸರು ಕಣ್ಣಿಟ್ಟು ನೋಡುತಿರುವರೆಂಬ ಆರೋಪದ ಬಗ್ಗೆ ಹೇಳುತ್ತ ಹಿಂಸೆ ಹಾಗು ಜಾತೀಯ ದ್ವೇಷ ಪ್ರಚಾರ ಮಾಡುವವರ ಮೇಲೆ ಕಣ್ಣಿಡಲು ಅವರಿಗೆ ಹೇಳಲಾಗಿದೆಂದು ತಿಳಿಸಿದರು.

ಅನಂತರ ರತ್ನಾಗಿರಿ ಭಾಗದ ಲೀಗ ಸದಸ್ಯರಾದ ಪಾರಕಾರರು ಕಾಂಗ್ರೆಸ ನಿಧಿಯನ್ನು ತಿರುಗಿ ಕೊಟ್ಟುದದಕ್ಕೆ ಆಕ್ಷೇಪವೆತ್ತಿ ನ್ಯಾಯಖಾತೆಯ ಪುರವಣಿ ಬೇಡಿಕೆಯಲ್ಲಿ ೧೦೦ ರೂ. ಕಡಿಯಬೇಕೆಂದು ಸೂಚಿಸಿದರು. ಉಳಿದ ಎಲ್ಲ ಪಕ್ಷದ ಜಪ್ತಾದ ಹಣವನ್ನು ತಿರುಗಿಕೊಡಬೇಕಾಗುವದೆಂದೂ ಅವರು ಹೇಳಿದರು. ಗೃಹಮಂತ್ರಿಗಳು ಉತ್ತರ ಕೊಡುತ್ತ ಅನ್ಯಾಯವಾಗಿ ನಿಧಿಯನ್ನು ಜಪ್ತಮಾಡಿದ್ದರಿಂದಲೆ ಅದನ್ನು ತಿರುಗಿ ಕೊಡಲಾಗುತ್ತದೆಂದೂ ಸ್ವಾತಂತ್ರ್ಯಕ್ಕಾಗಿ ಹೋರಾಡುವ ರಾಜಕೀಯ ಸಂಸ್ಥೆಯ ಅಧಿಕಾರದಲ್ಲಿ ಬಂದಾಗ ಅದರ ಹೋರಾಟದ ಉದ್ದೇಶವು ಹಾನಿಯನ್ನು ತುಂಬಿಕೊಳ್ಳುವದಿರದಿದ್ದರೂ ಹಾಗೆ ಮಾಡುವದು ಸಹಜವಿದೆಂದೂ ಯೋಗ್ಯ ಕಾರಣಕ್ಕಾಗಿ ಯೋಗ್ಯ ರೀತಿಯಲ್ಲಿ ಅದನ್ನು ತಿರುಗಿ ಕೊಟ್ಟದೆಂದೂ ಹೇಳಿದರು.

ಲಂಚಗುಳಿತನವನ್ನು ನಿರ್ಮೂಲ ಮಾಡಲಿಕೆ ಎಲ್ಲರೂ ಸಹಾಯ ಮಾಡಬೇಕೆಂದು ಗೃಹಮಂತ್ರಿಗಳು ಅಪ್ತಾರರ ಕಡಿತದ ಸೂಚನೆಗೆ ಉತ್ತರ ಕೊಡುವಾಗ ಹೇಳಿದರು. ಈ ಕಡಿತದ ಸೂಚನೆಯನ್ನು ಹಿಂದುಗಡೆ ಹಿಂತೆಗೆದುಕೊಳ್ಳಲಾಯಿತು.

### ಆಹಾರ ಹಾಗು ಬಟ್ಟೆಯ ಪರಿಸ್ಥಿತಿ

ಅನಂತರ ನಾಗರಿಕ ಪೂರೈಕೆ ಮಂತ್ರಿಗಳು ಸಂಕೀರ್ಣ ಖಾತೆಯ ಬಗ್ಗೆ ೩೪೧೬೪೦೦ ರೂ. ಗಳ ಪುರವಣಿ ಬೇಡಿಕೆಯನ್ನು ಮುಂಡಿಸಿದರು ಪ್ರಾಂತದಲ್ಲಿ ಆಹಾರ ಹಾಗು ಬಟ್ಟೆಯ ಹಂಚುವಿಕೆ ಸರಿಯಾಗಿ ಸಾಗಿಲ್ಲವೆಂದು ವಿರುದ್ಧ ಪಕ್ಷದವರು ಮಾಡಿದ ಟೀಕೆಗೆ ಉತ್ತರ ಕೊಡುತ್ತ ಸರಕಾರವು ಇದೀ ಪದ್ಧತಿಯನ್ನು ವ್ಯವಸ್ಥಿತವಾಗಿ ಸಾಗಿಸಿಕೊಂಡು ಹೋಗಲು ಸಾಧ್ಯವಿದ್ದ ಪ್ರಯತ್ನವನ್ನು ಮಾಡಲಾಗುವದೆಂದು ಹೇಳಿದರು. ಮುಂಬಯಿ ಪ್ರಾಂತ ಆಹಾರದ ವಿಷಯದಲ್ಲಿ ಕೊರತೆಯದಾದ್ದರಿಂದ ಹೊರಗಿನ ಆಯಾತವನ್ನವಲಂಬಿಸಬೇಕಾಗುವದೆಂದು ಹೇಳಿದರು. ಆಹಾರ ಪದಾರ್ಥಗಳಲ್ಲಿ ಕೆಲವು ಒಳ್ಳೆಯರಲ್ಲದಿದ್ದರೂ ಅವನ್ನು ತೆಗೆದುಕೊಂಡು ಹಂಚಬೇಕಾಗುವುದೆಂದು ತಿಳಿಸಿದರು. ಜನರ ಬೇಡಿಕೆಯನ್ನು ಪೂರೈಸುವಷ್ಟು ಬಟ್ಟೆ ಲಭ್ಯವಿಲ್ಲೆಂದೂ ಅವಶ್ಯಕ ಯಂತ್ರಗಳು ಬರುವದು ಕಠಿನವಾದ್ದರಿಂದ ಗಿರಣಿಗಳನ್ನು ಹೆಚ್ಚಿಸುವದು ಸಾಧ್ಯವಿರುವದಿಲ್ಲವೆಂದೂ ತಿಳಿಸಿದರು. ಅನಂತರ ವೈದ್ಯಕೀಯ ಖಾತೆಯ ೯೩೨೦೦೦ ರೂಪಾಯಿಯ ಪುರವಣಿ ಬೇಡಿಕೆಯು ಚರ್ಚೆಯ ನಂತರ ಮಾನ್ಯವಾಗಿ ಉಳಿದ ೨೪ ಬೇಡಿಕೆಗಳು ಚರ್ಚೆಯಿಲ್ಲದೆ ಮತಕ್ಕೆ ಹಾಕಲ್ಪಟ್ಟು ಸ್ವೀಕೃತವಾದವು

### ಬಹುಪತ್ನಿತ್ವ ಪ್ರತಿಬಂಧ

೨೬ ನೇ ತಾರೀಕು ಮುರಾರಜಿ ದೇಸಾಯರು ಬಹುಪತ್ನಿತ್ವ ಪ್ರತಿಬಂಧ ಮಸೂದೆಯನ್ನು ಮುಂಡಿಸಿದರು. ಅದು ಪರಿಶೀಲಕ ಸಮಿತಿಗೆ ಒಪ್ಪಿಸಲ್ಪಟ್ಟಿತು.

ಇದಕ್ಕೂ ಮೊದಲು ಹಿಂದೀ ಕಚ್ಚಾ ಅರಳೆ ಸಂಬಂಧದ ಮಸೂದೆ ಹಿಂದೀ ವಿದ್ಯುತ್ ಕಾಯದೆ ತಿದ್ದುಪಡಿ ಮಸೂದೆ ಸ್ವೀಕೃತವಾದವು. ಸಭೆ ಸಪ್ಟಂಬರ ೨ರ ವರೆಗೆ ಮುಂದರಿಯಿತು.

# ಬೆಂಗಳೂರು-ಮೈಸೂರು

ಮೈಸೂರು ಕಾಂಗ್ರೆಸ್ಸಿನ ಕಾರ್ಯ ಸಮಿತಿ ಕಳೆದ ವಾರ ಮಾಡಿದ ಒಂದು ಗೊತ್ತುವಳಿಯಲ್ಲಿ, ಘಟನಾ ಸಮಿತಿಯಿಂದ ಸಂಸ್ಥಾನಿ ಪ್ರಜೆಗಳನ್ನು ಮೊದಲಿಂದಲೂ ದೂರವಾಗಿಟ್ಟಿರುವದರಿಂದ ಅದು ಇಡೀ ಹಿಂದುಸ್ತಾನದ ಪ್ರತಿನಿಧಿಯೆಂದು ಹೇಳಿಸಿಕೊಳ್ಳಲಾರದೆಂದೂ ಅಧ್ಯಕ್ಷ ಚುನಾವಣೆ, ಊರ ಸಮಿತಿಗಳ ಆಯ್ಕೆ ಮೊದಲಾದ ವಿಷಯಗಳಲ್ಲಿ ಸಂಸ್ಥಾನ ಪ್ರಜೆಗಳಿಗೂ ಅಭಿಪ್ರಾಯ ವ್ಯಕ್ತಗೊಳಿಸಲು ಅವಕಾಶವಿರತಕ್ಕದ್ದೆಂದೂ ಅದುದರಿಂದ ಈ ಕೊರತೆಯನ್ನು ಬ್ರಿಟಿಶ ಮಂತ್ರಿಗಳು ದೂರ ಮಾಡಬೇಕೆಂದೂ ಕೇಳಿಕೊಂಡಿದೆ. ಇನ್ನೊಂದು ಗೊತ್ತುವಳಿಯ ಮೂಲಕ, ಬ್ರಿಟಿಶ ಮಂತ್ರಿತ್ರಯದ ಯೋಜನೆಯನ್ನು ಕುರಿತು ಮೈಸೂರು ಸರಕಾರ ವಹಿಸಿರುವ ಮೌನವನ್ನು ಟೀಕಿಸಿ, ಮೈಸೂರು ಹಿಂದೀ ಯೂನಿಯನ್ನು ಸೇರಬೇಕು ಮತ್ತು ಘಟನಾ ಸಮಿತಿಗೆ ಮೈಸೂರು ಪ್ರಜೆಗಳ ಪ್ರತಿನಿಧಿಗಳನ್ನೇ ಕಳಿಸಬೇಕು ಎಂದು ಬೇಡಿದೆ. ಮತ್ತೊಂದು ಗೊತ್ತುವಳಿಯ ಮುಖಾಂತರ ಸರ್ ರಾಮಸ್ವಾಮಿಯವರನ್ನು ದಿವಾಣರಾಗಿ ಆರಿಸುವ ಉಪಕ್ರಮವನ್ನು ನಿಷೇಧಿಸಿ, ನಿರಂಕುಶ ದಿವಾಣಗಿರಿಯ ಪದ್ಧತಿಯನ್ನು ಬಿಟ್ಟು ಹೊಣೆಗಾರ ಸರಕಾರವನ್ನು ಸ್ಥಾಪಿಸಬೇಕೆಂದು ಮಹಾರಾಜರಲ್ಲಿ ಪ್ರಾರ್ಥಿಸಲಾಗಿದೆ.

ಮೈಸೂರು ಸರಕಾರದ ಪ್ರಚಾರ ಶಾಖೆಯನ್ನು ಮುಚ್ಚಿ ಅದರ ಬದಲು ಯೋಜನೆ ಮತ್ತು ಪ್ರಚಾರ ಶಾಖೆಯನ್ನು ಸೇರಿಸಿ ಹೊಸ ಸಮಾಚಾರ ಶಾಖೆಯನ್ನು ತೆರೆಯುವ ನಿರ್ಣಯವಾಗಿದೆಯೆಂದು ತಿಳಿಯುತ್ತದೆ. ಸರಕಾರದ ಕಾರ್ಯದರ್ಶಿಗಳೊಬ್ಬರು ಇದರ ಮೇಲ್ವಿಚಾರಣೆಯನ್ನು ವಹಿಸುವರು.

ಮೈಸೂರು ಶಾಸನ ಸಭೆಯ ೨೬ ಸದಸ್ಯರು ದಿವಾಣರ ಮುಖಾಂತರ ಮೈಸೂರರಸರಿಗೆ ಒಂದು ಮನವಿಯನ್ನು ಕಳಿಸಿದ್ದಾರೆ. ಮೈಸೂರಲ್ಲಿ ಹೊಣೆಗಾರ ಸರಕಾರವನ್ನು ಸ್ಥಾಪಿಸಬೇಕೆಂದೂ ಘಟನಾ ಸಮಿತಿಗೆ ಪ್ರಜೆಗಳ ಪ್ರತಿನಿಧಿಗಳನ್ನೆ ಕಳಿಸಬೇಕೆಂದೂ ಪ್ರಾರ್ಥಿಸಿಕೊಂಡಿದ್ದಾರೆ. ಇದಕ್ಕೆ ಸಹಿ ಹಾಕಿದವರಲ್ಲಿ ೧೮ ಜನ ಕಾಂಗ್ರೆಸಿಗರು, ಇಬ್ಬರು ಕೂಲಿಕಾರರು ಮತ್ತು ಉಳಿದವರು ೬ ಜನ.

ಕೋಲಾರದ ಜಿಲ್ಹಾಧಿಕಾರಿಗಳಾದ ಶ್ರೀ ಕೆ. ಗುರುದತ್ತ ಇವರನ್ನು ಆಹಾರ ಪೂರೈಕೆ ನಿರ್ದೇಶಕರಾಗಿಯೂ ಆ ಕೆಲಸದಲ್ಲಿದ್ದ ಶ್ರೀ ಕೆ ಶ್ರೀನಿವಾಸನ್ನರನ್ನು ಆಹಾರ ಶಾಖೆಯ ಕಾರ್ಯದರ್ಶಿಗಳಾಗಿಯೂ ನೇಮಿಸಲಾಗಿದೆ.

ಮೈಸೂರು ಸರಕಾರದವರು ಶಾಸನ ಸಭೆಗಳ ಸದಸ್ಯರ ಅರ್ಹತಾ ನಿಯಮಗಳನ್ನು ಕೆಲ ಮಟ್ಟಿಗೆ ಸಡಿಲಿಸಿದ್ದಾರೆ. ೬ ತಿಂಗಳು ಶಿಕ್ಷೆ ಹೊಂದಿದವರು ಸದಸ್ಯತ್ವಕ್ಕೆ ಅನರ್ಹರಾಗುವರೆಂಬ ನಿಯಮವಿದ್ದುದನ್ನು ೨ ವರ್ಷ ಎಂದು ತಿದ್ದಲಾಗಿದೆ. ಸರಕಾರಿ ನೌಕರಿಯಲ್ಲಿದ್ದು ಹೊರಗೆ ಹಾಕಲ್ಪಟ್ಟವರಿಗೂ ವಕೀಲಿ ಸನದುಗಳು ರದ್ದುಗೊಳಿಸಲ್ಪಟ್ಟ ವಕೀಲರಿಗೂ ಶಾಸನ ಸಭೆಯ ಸದಸ್ಯರಾಗಲು ಅನರ್ಹರೆಂಬ ನಿಯಮವನ್ನು ತೆಗೆದುಹಾಕಿದೆ.

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರಪೇಟೆ

ತಾ. ೩೧

ಕಳೆದ ಶುಕ್ರವಾರ ಶೇರಪೇಟೆಯಲ್ಲಿ ಅಕಸ್ಮಾತ್ ಇಳಿತಾಯವಾದರೂ ಈ ಹಿಂದೇಟಿನಿಂದ ಸುಧಾರಿಸಿಕೊಳ್ಳಲು ಬಹಳ ಕಾಲ ಹಿಡಿಯಲಿಲ್ಲ. ಏರುತ್ತೇರುತ್ತ ಹೋದ ಪೇಟೆಗೆ ಉಸಿರು ಬಿಡುವ ಅವಕಾಶ ಬೇಕಿತ್ತೆಂದು ಹೀಗಾಗುತ್ತಿತ್ತು. ಹೀಗೆ ಟಾಟಾ ಡೆಫರ್ಡ ಪಾಲುಗಳ ಬೆಲೆ ೩೩೭೭-೮-೦ ಗಿಳಿದರೂ ೩೪೮೬-೪-೦ರವರೆಗೂ ಏರಿ ೩೪೫೦-೦-೦ ರಲ್ಲಿ [ತಾ. ೩೦] ನಿಂತಿತು. ಡಾಯಿಂಗ್ ೨೮೬೦-೦ ಕ್ಕಿಳಿದುದು ೨೯೫೦-೦-೦ ಕ್ಕೇರಿದರೂ ಪುನಃ ೨೮೭೫-೦-೦ ಕ್ಕೆ ಬಂತು. ಕೋಹಿನೂರು ೧೦೬೮ ರಿಂದ ೧೧೮೦-೦-೦ ಕ್ಕೇರಿ ೧೧೩೦-೦-೦ಕ್ಕಿಳಿಯಿತು ಸ್ವದೇಶಿ ೯೧೦-೦-೦ ರಿಂದ ೯೭೪-೦-೦ಕ್ಕೇರಿ ೯೩೫-೦-೦ಕ್ಕೂ ಗೋಕಾಕ ೫೦೦-೦-೦ ರಿಂದ ೫೨೭-೦-೦ಕ್ಕೇರಿ ೫೧೫ಕ್ಕೂ ಸೆಂಚುರಿ ೧೩೦೦-೦-೦ ರಿಂದ ೧೨೫೦-೦-೦ ಕ್ಕೂ ಸೆಂಟ್ರಲ್ ಇಂಡಿಯಾ ೫೨೨-೦-೦ರಿಂದ ೫೫೦-೦-೦ಕ್ಕೇರಿ ೫೩೫-೦-೦ ಕ್ಕೂ ಬೇಲಾಪುರ ೩೫೨-೦-೦ ರಿಂದ ೩೬೫-೦-೦ ಕ್ಕೇರಿ ೩೫೭-೦-೦ ಕ್ಕೂ ಸಿಂಧ್ಯಸ್ಟೀಮ ೫೬-೧೦-೦ ರಿಂದ ೫೫-೦-೦ ಕ್ಕೂ ಅಸೋಸಿಯೇಟೆಡ್ ಸಿಮೆಂಟ ೨೭೨-೦-೦ ರಿಂದ ೨೭೭-೦-೦ ಕ್ಕೇರಿ ೨೭೩-೦-೦ ಕ್ಕೂ ಇಳಿದವು. ಮುಸ್ಲಿಂಲೀಗಿನ ಉಗ್ರ ನಿರ್ಣಯದಿಂದ ಪಾಲುಗಳ ಬೆಲೆ ಕೊನೆಯ ದಿನ ಸ್ವಲ್ಪ ಜಗ್ಗಿತೆಂದು ಹೇಳಬಹುದು. ಬ್ಯಾಂಕುಗಳಲ್ಲಿ ಸೆಂಟ್ರಲ ೧೫೩-೦-೦ ರಿಂದ ೧೫೫-೦-೦ ಕ್ಕೇರಿ ೧೫೩-೦-೦ ಕ್ಕೂ ಇಂಪೀರಿಯಲ್ ಎಫ್. ಸಿ. ೩೩೫೫-೦-೦ ರಿಂದ ೩೩೦೦-೦-೦ ಕ್ಕೂ ರಿಝರ್ವ ೧೭೯-೦-೦ ರಿಂದ ೧೭೬-೮-೦ ಕ್ಕೂ ಇಳಿದವು.

ಸರಕಾರಿ ಸಾಲಪತ್ರಗಳಲ್ಲಿ ಜಿ. ಪಿ. ೧೦೬-೧೪-೦ ರಿಂದ ೧೦೬-೫-೦ ಕ್ಕಿಳಿದರೆ ೩॥ ದರದ ೧೦೨-೧೨-೦ ರಲ್ಲಿ ಯಥಾಸ್ಥಿತಿ.

## ಚಿನ್ನ--ಬೆಳ್ಳಿ

ಚಿನ್ನ ಬೆಳ್ಳಿ ದರಗಳಲ್ಲಿ ಅದೊಂದೂ ಸ್ಥಿತ್ಯಂತರವಾಗಿಲ್ಲ. ೯೩-೨-೦ ರಲ್ಲಿದ್ದ ವಾಯದಾ ಚಿನ್ನ ೯೫-೨-೦ ಕ್ಕೇರಿ ಸೋಮವಾರ ೯೪-೧೪-೦ ರಲ್ಲಿತ್ತು. ಅನಂತರ ವ್ಯಾಪಾರವಾಗಿಲ್ಲ. ವಾಯದಾ ೯೩-೧೪-೦ ಬೆಳ್ಳಿ ತಯಾರಿ ೧೬೨-೦-೦ ರಿಂದ ೧೬೪-೧೨-೦ ಕ್ಕೇರಿದೆ. ವಾಯದಾ ೧೬೫-೨-೦

## ಅರಳೆ

ಅರಳೆ ಸಮಿತಿಯವರು ಅರಳೆಯ ಕನಿಷ್ಠ ಧಾರಣೆ ಏರಿಸುವರೆಂದು ಸುದ್ದಿ ಬಂದು ಧಾರಣೆಯೇರುವಂತೆ ಕಂಡರೂ ಮುಸ್ಲಿಂ ಲೀಗ ನಿರ್ಧಾರದ ಕಾರಣದಿಂದ ಅದು ಅಲ್ಲಿ ಅಡಗಿಹೋಯಿತು. ಸಪ್ಟಂಬರ ಅರಳೆ ೧೬೩-೪-೦ ರಿಂದ ೧೫೯-೮-೦ ಕ್ಕಿಳಿದಿದೆ.

## ಎಣ್ಣೆಕಾಳು

| | |
|---|---|
| ಶೇಂಗಾ | ೧೨೦—೦—೦ |
| ಅಗಸಿ | ೨೭—೭—೦ |
| ಅಗಸಿ ಎಣ್ಣೆ | ೧೬—೦—೦ |

## ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ ರೂ. | | ೧೪—೧೬ |
| ಅರಿಷಿಣ ಹೇರು | | ೮೦-೮೮ |
| ಶೇಂಗಾ ಖಂಡಿ | ,, | ೧೦೫ |
| ಮೆಣಸಿನಕಾಯಿ ಹೇರು | ,, | ೧೮೦—೧೯೫ |
| ದೇಶಿ ತಂಬಾಕು ಹೇರು | | ೧೦೦-೨೦೦ |
| ತಂಬಾಕ ಪಂಢರಪುರಿ | " | ೧೫೦—೨೫೦ |
| ತಂಬಾಕು ಅಕೋಳ (ಹೇರು) | | ೨೫೦—೪೦೦ |

## ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೩೦೦ |
| ,, | ನಂ. ೨ | ೨೯೦ |
| ,, | ನಂ. ೩ | ೨೮೦-೨೮೫ |
| ಜಿನ | | ೩೨೨೫-೨೩೦ |
| ಸಾಜಿನೆ | | ೨೦೫-೨೧೦ |
| ಡಬಲರೋಲರ | | ೨೦೫-೨೧೫ |

# ದಕ್ಷಿಣ ಕನ್ನಡ

ಉಡುಪಿಯಲ್ಲಿ ತಾ. ೧೦ (ಜುಲೈ)ಕ್ಕೆ ಜರಗಿದ ಹಿಂದೂ ಧರ್ಮಾಭಿಮಾನಿಗಳ ಸಭೆಯೊಂದರಲ್ಲಿ ಮದ್ರಾಸ್ ಸರಕಾರದವರು ಮಠ ಸಂಸ್ಥಾನಗಳ ಹಣಕಾಸಿನ ಮೇಲೆ ನಿಯಂತ್ರಣ ಹೊರಿಸಲು ಸಿದ್ಧಗೊಳಿಸಿರುವ ಮಸೂದೆಯ ವಿರುದ್ಧ ಚಳವಳಿ ಹೂಡಲು ನಿರ್ಧರಿಸಲಾಗಿತ್ತು. ಈ ಸಂಬಂಧದಲ್ಲಿ ಅಗಸ್ಟ ೧೧ಕ್ಕೆ ಉಡುಪಿಯಲ್ಲಿ ಹಿಂದೂಗಳ ಪರಿಷತ್ತೊಂದನ್ನು ಕೂಡಿಸುವ ನಿರ್ಣಯವೂ ಆಗಿತ್ತು. ಈ ಪರಿಷತ್ತಿನ ಸ್ವಾಗತ ಸಮಿತಿಯ ಅಧ್ಯಕ್ಷತೆಯನ್ನು ದ. ಕ ಜಿಲ್ಹಾ ಬೋರ್ಡ ಮತ್ತು ಉಡುಪಿಯ ನಗರ ಸಭೆ ಇವುಗಳ ಅಧ್ಯಕ್ಷರಾದ ವಕೀಲ ಆರೂರು ಲಕ್ಷ್ಮೀ ನಾರಾಯಣರಾಯರು ವಹಿಸಿಕೊಂಡಿದ್ದಾರೆ. ಪರಿಷತ್ತಿನ ಸಿದ್ಧತೆಗಳು ಭರದಿಂದ ನಡೆದಿವೆ. ಸ್ವಾಗತ ಸಮಿತಿಯವರು ಹೊರಡಿಸಿದ ಪರಿಪತ್ರವೊಂದರಲ್ಲಿ ಮಠ ದೇವಸ್ಥಾನಗಳ ಈ ಮಸೂದೆಯ ಮೂಲಕ ಮಠಾಧಿಪತಿಗಳನ್ನು ಕೇವಲ ಅರ್ಚಕರ ಮಟ್ಟಕ್ಕಿಳಿಸಿಬಿಡುವ ಉದ್ಯೋಗದಲ್ಲಿ ಸರಕಾರ ಇದೆಯೆಂದೂ ಇದರಿಂದ ಧರ್ಮ ಸಂಸ್ಥೆಗಳ ಮೂಲವನ್ನೇ ಕಿತ್ತುಹಾಕಿದಂತಾಗುವದೆಂದೂ ಜನಪ್ರಿಯ ಕಾಂಗ್ರೆಸ್ ಸರಕಾರ ಈ ಉಪಕ್ರಮ ಮಾಡಬಾರದೆಂದೂ ಹೇಳಲಾಗಿದೆ.

ತಾ. ೨೭ಕ್ಕೆ ಮಂಗಳೂರಲ್ಲಿ ಜಿಲ್ಹಾ ಉಪಾಧ್ಯಾಯ ಸಂಘದ ಆಶ್ರಯದಲ್ಲಿ ಶ್ರೀ ಎಸ್. ಮುಕುಂದರಾಯರ ಅಧ್ಯಕ್ಷತೆಯಲ್ಲಿ ಸ್ಥಳೀಯ ಅಧ್ಯಾಪಕರ ಬಹಿರಂಗ ಸಭೆಯೊಂದು ಸೇರಿ, ಪ್ರಾಂತಿಕ ಉಪಾಧ್ಯಾಯ ಸಂಘದವರು ಅಧ್ಯಾಪಕರ ವೇತನ ಸಂಬಂಧದಲ್ಲಿ ಸರಕಾರದ ಮತ್ತು ಜನತೆಯ ಮುಂದಿರಿಸಿದ ಬೇಡಿಕೆಗಳಿಗೆ ಬೆಂಬಲ ಕೊಡಲಾಯಿತು. ಸಂಘದವರು ಅದೇ ದಿನ ಮದ್ರಾಸ ಮುಖ್ಯ ಮಂತ್ರಿಗಳನ್ನು ಕಂಡು ಬೇಡಿಕೆಗಳನ್ನು ಮುಂದಿಟ್ಟರು. ಅಧ್ಯಕ್ಷರು ಶಿಕ್ಷಕರ ವಿಪನ್ನ ಆರ್ಥಿಕ ಪರಿಸ್ಥಿತಿಯನ್ನು ವಿವರಿಸಿ ಈ ವರೆಗೆ ಪ್ರಾರ್ಥನೆಗಳ ಹಾದಿಯನ್ನು ಬಿಟ್ಟು ಬೇಡಿಕೆಗಳನ್ನು ಮುಂದೊಡ್ಡಬೇಕಾಗಿದೆಯೆಂದೂ ಇದಕ್ಕಾಗಿ ಶಿಕ್ಷಕರು ಎಂಥ ತ್ಯಾಗಕ್ಕೂ ಸಿದ್ಧರಿರುವರೆಂದೂ ಎಚ್ಚರಿಕೆ ಕೊಟ್ಟರು.

## ರಾಮಸ್ವಾಮಿ ಮುದಲಿಯಾರರಿಗೆ ದಿವಾಣ ಪಟ್ಟ

### ಮೈಸೂರು ಸರಕಾರದ ಪ್ರಕಟನೆ

ಮೈಸೂರು ಸಂಸ್ಥಾನದ ದಿವಾಣರನ್ನಾಗಿ ಸರ್ ಆರ್ಕಾಟ ರಾಮಸ್ವಾಮಿ ಮುದಲಿಯಾರರನ್ನು ನೇಮಿಸಲಾಗಿದೆಯೆಂದು ಸರಕಾರಿ ಪ್ರಕಟನೆ ಹೊರಟಿದೆ. ಸದ್ಯದ ದಿವಾಣರಾದ ಪ್ರಧಾನ ಶಿರೋಮಣಿ ಎಸ್ ಮಾಧವರಾಯರ ನೇಮಕ ಅವಧಿ ಇನ್ನೂ ಹಲವು ತಿಂಗಳುಗಳ ವರೆಗೆ ಮುಗಿಯುವದಿಲ್ಲವಾದರೂ ಅವರು ನಿವೃತ್ತಿಗೆ ಪೂರ್ವಭಾವಿಯಾಗಿ ಆಗಸ್ಟ ೭ಕ್ಕೆ ತಮ್ಮ ಸ್ಥಳವನ್ನು ಬಿಟ್ಟುಕೊಡುವರೆಂದು ಅದರಲ್ಲಿ ಹೇಳಲಾಗಿದೆ. ಸರ್ ಮುದಲಿಯಾರರು ಈ ವರೆಗೆ ವಾಯಿಸರಾಯರ ಕಾರ್ಯಕಾರಿ ಮಂಡಲದ ಸದಸ್ಯರಾಗಿದ್ದರು. ದಿವಾಣ ಮಾಧವರಾಯರು ಜೂನ ೧೯೪೧ ರಲ್ಲಿ ಒಂದು ವರ್ಷ ಅವಧಿಗಾಗಿ ನೇಮಕ ಹೊಂದಿ ಮುಂದೆ ಆ ಅವಧಿಯನ್ನು ಮತ್ತೈದು ವರ್ಷ ಬೆಳೆಸಲಾಗಿತ್ತು.





ಈ ವಾರದ ಕತೆ

# ಮೂವರು ಕಸಾಯಿಗಳು

ಶ್ರೀ ಕೃಷ್ಣ ಪಾಟೀಲ ಬೆಳಗಾವಿ

ಸುಕನ್ಯಾನ ಸ್ತ್ರೀಜೀವನದಲ್ಲಿ ಕೊರತೆ ಏನಿದೆ? ನಂದಕನು ಸುಸ್ವರೂಪ ಧನಾಢ್ಯ ಗಂಡ. ಬೆಳಗಾವಿಯಲ್ಲಿ ಇರಲು ಒಂದು ಅಚ್ಚುಕಟ್ಟಾದ ಮನೆ. ಮೇಲೆ ಪ್ರತಿಷ್ಠಿತ ನಾಗರಿಕರಲ್ಲಿ ಮಾನ—ಮರ್ಯಾದೆ-ಹಿಡಿತುಂಬ ಹೊನ್ನು ತುಂಬಿಕೊಂಡಿರುವ ಒಂದು ನವಕರಿ. ಪಿತ್ರಾರ್ಜಿತ ಆಸ್ತಿ. ಈ ತೃಪ್ತಜೀವನಕ್ಕೆ ಮಹಾಪೂರಬಂದಂತೆ ನಾಲ್ಕು ವರುಷದ ಒಂದು ಚಿನ್ನದ ಗೊಂಬೆಯಂತಹ ಮಗಳು ನಂದಿನಿ.

ಸುಕನ್ಯಾ ತನ್ನ ದಾಂಪತ್ಯಜೀವನದಲ್ಲಿ ಇದು ಕಡಿಮೆ ! ಎಂದು ಕನಸು—ಮನಸಿನಲ್ಲಿ ನೆನೆಸಿದವಳಲ್ಲ. ತನ್ನ ರೂಪ, ತನ್ನ ವಿದ್ಯೆ, ತನ್ನ ಅನುಭವವೆಲ್ಲವನ್ನು ಗಂಡನ ಪಾದದಡಿಯಲ್ಲಿಟ್ಟು ಪ್ರೇಮಗಂಗೆಯಲ್ಲಿ ತುಂಬಾತುಂಬ ಈಸಾಡಿದವಳು. ದೇವರು ತನ್ನ ಬಾಲ್ಯಜೀವನದ ನೂರಾರು ಸಂಕಟಗಳನ್ನು ಪರಿಹರಿಸಿ ಒಂದು ಸ್ಥಿರ ಪದವಿಗೆ ಏರಿಸಿದನಲ್ಲ ! ಎಂದು ಅನನ್ಯ ಭಾವದಿಂದ ಹಗಲಿರುಳು ಸ್ತುತಿಸುತ್ತಿದ್ದಳು.

ಸ್ತ್ರೀ ಮೊದಲೇ ಆಚಾರನಿಷ್ಠ ಪ್ರಾಣಿ. ಮೇಲೆ ಇಂಥ ಅನುಕೂಲತೆ ಒದಗಿಬಂದರೆ ಅದೊಂದು ಪುರಾಣನಾದು ಚೂಡಾಮಣಿಯೇ ಸರಿ.

ಸುಕನ್ಯಾ ಮುಂಜಾವಿನಲ್ಲಿ ಉಷಯರಾಗದ ಜೊತೆಗೆ ಏಳುವಳು. ಮುಖಮಾರ್ಜನಾದಿಗಳನ್ನು ತೀರಿಸಿ, ತುಳಸಿಗೆ ನೀರು ಹಾಕ್ಯಖಂಡ ಸೌಭಾಗ್ಯದ ಕುಂಕುಮವನ್ನು ಹಚ್ಚಿಕೊಳ್ಳುವಳು. ಮುಂದೆ ಅಂಗಳ, ಹಿತ್ತಲ ಸ್ವಚ್ಛತೆ. ಗಂಡನಿಗೆ ನೀರುಕಾಸಿ ಚಹಾ ಸಿದ್ಧಪಡಿಸುವಳು. ಅವನು ಅದನ್ನು ಕುಡಿದು ಒಂದಿಷ್ಟು ತಿರುಗಾಡಿಕೊಂಡು ಬರುವಷ್ಟರಲ್ಲಿ ಅಡಿಗೆಯ ತಯಾರಿ- ಗಂಡ ನೂಟ. ಅವನು ಕಚೇರಿಗೆ ಹೋದನೆಂದರೆ ತನ್ನ ಮನೆ, ತನ್ನ ಕೆಲಸ; ಕೆಲಸದ ತುಂಬ ನಂದಿನಿಯ ಮುದ್ದು ಮುಖದ ಸಾವಿರ ಮುತ್ತುಗಳ ಪ್ರಸಾದ. ಇದೆಲ್ಲ ಜಂತ್ರದಂತೆ ಸಾಗಿದರೂ ಪ್ರತಿನಿತ್ಯದ ಸೂರ್ಯೋದಯದ ಜೊತೆಗೆ ನವನವೋದಿತವಾಗಿ ಹೊಸದಿನದ ಪ್ರಸನ್ನ ವದನವೇ.

ಇಂದು ನಂದಕನು ಕಚೇರಿಯಿಂದ ಬೇಗ ಬಂದನು. ಚಹಾ ಕುಡಿದು ತಿರುಗಾಡಿಕೊಂಡು ಬರಲು ಹೊರಟರು. ರೀಝು ಸಿನೇಮಾಗ್ರಹದ ಮುಂದೆ ರಾಡು ಕ್ಯಾಂಪಿಗೆ ಬಂದರು. ಅಲ್ಲೊಂದು ಬೈಲು- ಸಂಜೆಯ ತಿಳಿಗಾಳಿ ಗಿಡಗಳೊಳಗಿಂದ ನುಸಿಕೊಂಡು ಬೀಸುತ್ತಿದೆ. ಅಸ್ತಮಿಸುವ ಸೂರ್ಯನ ಹೊಂಬಣ್ಣದ ಕಿರಣಗಳು ಪೂರ್ವದ ಮೋಡಗಳ ಮೇಲೆ ಬಿದ್ದು ಪರಾವರ್ತನಹೊಂದಿ ಮುಗಿಲ ತುಂಬ ಕುಂಕುಮ ಎರಚಿದಂತೆ ನಸುಗೆಂಪು ಹರಡಿದೆ. ಮುಗಿಲ ಕನ್ನಡಿಯಲ್ಲಿ ಮುಖ ನೋಡನಿಂತ ಭೂಮಿಯ ತುಂಬೂ ತಿಳಿಗೆಂಪು. ಈ ಗೋಧೂಳಿಯ ಸಮಯದಲ್ಲಿ ಸುಕನ್ಯಾ, ನಂದಕನ ಜೊತೆಗೆ ಪ್ರಪಂಚದ ಮಾತುಗಳನ್ನು ಆಡುತ್ತಾ ಬೈಲಲ್ಲಿ ಕುಳಿತಳು. ನಂದಿನಿ ತನ್ನ ಪುಟ್ಟಪುಟ್ಟ ಕೈಕಾಲುಗಳನ್ನು ತಿರುಗಿಸುತ್ತಾ ದೂರ ಹೋಗುವಳು. ತಂದೆಯ ಬೆನ್ನಹಿಂದೆ ಅಡಗುವಳು. ತಾಯಿಯ ಸೆರಗಿನಲ್ಲಿ ಮುಖ ಮುಚ್ಚಿಕೊಳ್ಳುವಳು. ಅವಳು ಬಾಲಲೀಲೆಯನ್ನು ಹೇಗೆ ಪ್ರದರ್ಶಿಸಿದರೂ ಅವರಿಗೆ ಸಂತೋಷವೇ !

ದೂರದಲ್ಲಿ ೮-೧೦ ಆಕಳುಗಳು ಒಣ ಹುಲ್ಲನ್ನು ಹರಿದು ತಿನ್ನುತ್ತಿವೆ. ಒಂದಿಷ್ಟು ಅಂತರದ ಮೇಲೆ ಮೂವರು ಹರಟಿಕೊಚ್ಚುತ್ತ ಚಿಲುಮೆಯನ್ನು ಹೊತ್ತಿಸಿರುವರು.

ನಂದಕನು ಎದ್ದು ಅವರ ಬಳಿಗೆ ಹೋದನು. ಅವರ ಮಾತಿನಲ್ಲಿ ತಾನೂ ಸೇರಿದನು.

ಒಂದು ಮುದಿ ಆಕಳು ಮೇಯುತ್ತ ಮುಂದೆ ಬಂದಿತು. ನಂದಿನಿಯು ಅದನ್ನು ಎವೆಯಿಕ್ಕದೆ ನೋಡುತ್ತ ನಿಂತಳು. ಮಗುವಿಗೆ ಆ ಮೂಳೆಹಾಸ ದೀನ ಮುಖದ ಆಕಳಲ್ಲಿ ಎಂಥ ಆತ್ಮೀಯತೆಯೋ !

ಆಕಳು ಹುಲ್ಲನ್ನು ತಿನ್ನುವದನ್ನು ನಿಲ್ಲಿಸಿತು. ತಲೆಯನ್ನು ಕೊಡಹಿತು. ಕಿವಿಯನ್ನು ನಿಮಿರಿಸಿತು. ಕತ್ತೆತ್ತಿ ನಂದಿನಿಯನ್ನು ತುಂಬುಗಣ್ಣಿನಿಂದ ನೋಡಹತ್ತಿತು. ನಂದಿನಿಯು ಸಹ ಕಣ್ಣಲ್ಲಿ ಕಣ್ಣಿಟ್ಟು ನೋಡಹತ್ತಿದಳು. ಎರಡು ಅಜ್ಞಾನಿ ಪ್ರಾಣಿಗಳ ಕಣ್ಣು ಕಣ್ಣಲ್ಲಿ ಎಂಥ ಸಂಕೇತ ದೀರಿದುವೋ ?

ಸುಕನ್ಯಾ ಓಡಿ ಹೋಗಿ ಮಗಳ ಬಳಿಯಲ್ಲಿ ನಿಂತಳು. ಆಕಳು ಇಬ್ಬರನ್ನೂ ಕಣ್ಣಲ್ಲಿ ತುಂಬಿಕೊಂಡಿತು. ಮತ್ತೂ ನೋಡಹತ್ತಿತು. ಸುಕನ್ಯಾ ಆಕಳು ತನ್ನ ಮಗಳನ್ನು ಇರಿಯಬಯಸಿದೆ ಎಂದು ಬೆದರಿದಳು. ಅಹುದು, ಅದು ಎರಡು ಹೆಜ್ಜೆ ಮುಂದೆಬಂದಿತು. ತಾಯಿ ರಕ್ಷಣೆಯ ಸ್ವರವನ್ನೆತ್ತಿ " ಹಲ್ಯಾ " ಎಂದಳು. ಆಕಳು ಅಲ್ಲೇ ನಿಂತಿತು. ಆದರೆ ದೃಷ್ಟಿಯನ್ನು ಕದಲಿಸಲಿಲ್ಲ.

ಸುಕನ್ಯಾಗೆ ಆಶ್ಚರ್ಯವಾಯಿತು. ಮೂಕ ಪ್ರಾಣಿಗೆ ಮಾತು ಬಂದಿದ್ದರೆ— ಏಕೆ ನೋಡುವೆ? ಎಂದು ಕೇಳಿ ಉತ್ತರವನ್ನು ಪಡೆಯುತ್ತಿದ್ದಳು. ಆದರೆ ಅದೆಲ್ಲ ಹಾಳು ಕಲ್ಪನೆ!

ಆಕಳು "ಅಂಬಾ" ಎಂದಿತು.

ಅಜ್ಞಾನ, ಮುದಿ ಆಕಳಿನ ಅಂಬಾ! ಧ್ವನಿಯಿಂದ ಏನು ತಿಳಿಯಬೇಕು! ಮಾನವನು ತನ್ನ ಮಾತನ್ನೇ ತಾನು ನೆಟ್ಟಗೆ ಅರಿಯದ ಸಮಯದಲ್ಲಿ ಪಶುಗಳ ಮಾತನ್ನು ತಿಳಿಯಬಹುದೇ? ತಿಳಿದಿದ್ದರೆ ಸ್ವಾರ್ಥಿ ಮಾನವನು ತನ್ನ ಆತ್ಮನಿಷ್ಠ ಸಾಹಿತ್ಯದಲ್ಲಿ ಅವುಗಳಿಗೂ ಒಂದು ಸ್ಥಿರಸ್ಥಾನವನ್ನು ಕೊಡುತ್ತಿದ್ದ. ಆದರೆ ಅದಕ್ಕೆ ಅಣಕಿಸುವಂತೆ—

—ನಂದಿನಿ, ಅಂಬಾ ಎನ್ನುವದು ನೋಡೇ ! ಎಂದಳು. ಮಗಳು ತೊದಲು ಮಾತಿನಿಂದ ಅಂಬಾ ಎಂದಳು.

ಆಕಳು ಕೇಳಿ ಉತ್ತರವಾಗಿ ಅಂಬಾ ಎಂದಿತು. ಎರಡು ಹೆಜ್ಜೆ ಮುಂದೆ ಇಡಬಯಸಿತು.

ಸುಕನ್ಯಾ ಬೇರೊಂದು ತಿಳಿದಳು. ಸಮೀಪದಲ್ಲಿಯ ಒಂದು ಕಲ್ಲು ಎತ್ತಿದಳು. ಆಕಳು ಮತ್ತೆ ನಿಂತಿತು.

ತಾಯಿಗೆ ಇದೊಂದು ಗೂಢವಾಗಿ ಕಂಡಿತು. ದನಗಳು ಮನುಷ್ಯರನ್ನು ಹೀಗೆ ನಿರುಕಿಸಿ ನೋಡುವದರ ಅರ್ಥವೇನು? ಅವುಗಳಿಗೆ ನಮ್ಮಂಥ ತಾಯಿತನದ ಸಂಬಂಧವಿಲ್ಲ, ಅಕ್ಕ, ತಂಗಿ, ಬಳಗದ ಒಡೆಯ-ಒಡೆತನದ ಸಂಬಂಧವೇ? ಏನಿದೆ? ಏನೂ ಇಲ್ಲ. ಹೀಗಿದ್ದು ಯಾಕೆ ನೋಡಬೇಕು! –

ಹೋಗಲಿ! ಒಂದು ಉದ್ದೇಶವಿದೆಯೆಂದು ಕೊಳ್ಳೋಣ. ಆ ಉದ್ದೇಶವನ್ನು ಬಾಯಿಂದ ಹೇಳಲು ಶಕ್ತಿಯಿಲ್ಲದಿದ್ದರೆ ಉದ್ದೇಶದ ಬೆಲೆಯೇನು?

ಉದ್ದೇಶದ ಫಲಶ್ರುತಿಗೆ ಒಂದು ಕೃತಿ ಅವಶ್ಯ. ಕೃತಿಯ ಪೂರ್ಣತೆಗೆ ಭಾಷೆ ಬೇಡವೇ? ಏನೋ ನಮ್ಮಂತೆ ಆಹಾರ ತಿನ್ನುವದು. ಆಹಾರ ಬೇಕೆಂಬುದನ್ನು ತಿಳಿಸಲು ಒಂದು ಸಂಕೇತ! ನಮ್ಮಂತೆಯೇ ನಿದ್ರೆಗೈಯುವದು. ನಿದ್ರೆ ಬಂದಿದೆಯೆಂಬದನ್ನು ಅರಿಯಲು ಒಂದು ಸಂಕೇತ. ಈ ನನ್ನ ಕೈಕಲ್ಲಿಗೆ ಬೆದರಿತು. ಬೆದರಿದೆ ಎನ್ನಲು ಸ್ಥಿರ ನಿಂತಿತು. ಇದೂ ಒಂದು ಸಂಕೇತ. ತಮ್ಮ ವಂಶವನ್ನು ಹಬ್ಬಿಸುವವು. ಅದು ಸಹ ಒಂದು ರಾಕ್ಷಸೀ ಸಂಕೇತದಿಂದಲೇ! ಇಷ್ಟು ದೊಡ್ಡ ಪ್ರಾಣಿಯು ಭಾವಶೂನ್ಯ ಸಂಕೇತಗಳ ಮೇಲೆ ಅವಲಂಬಿಸಿ ಬಾಳುವದು ವಿಚಿತ್ರವೆಂದಳು.

ನಂದಕನು ತಿರುಗಿ ಬಂದುದು ತಿಳಿಯಲಿಲ್ಲ. ತನ್ನ ಭಾವಲೋಕದ ನೂರಾರು ಸಂಗತಿಗಳು ತಲಕುಮಲಕುಗಳ ಮೇಲಾಡಿಕೆಯಲ್ಲಿಯೇ ಇದ್ದಳು.

ಆಕಳು ಇನ್ನೂ ಅಲ್ಲೇ ನಿಂತಿದ್ದಿತು. ಆ ದನಗಾಹಿಯು ಬಡಿಗೆಯ ಹೊಡೆತಕ್ಕೆ ಅಂಬಾ ಎಂದು ಒದರಿ ಹಿಂಡಿನಲ್ಲಿ ಕೂಡಿತು.

—ನಂದಿನಿ ಮನೆಗೆ ನಡೆ. ಎಂದು ನಂದಕನು ಮಗುವನ್ನೆತ್ತಿಕೊಂಡನು.

ಸುಕನ್ಯಾ ಭೂಮಿಗಿಳಿದು ಬಂದವರಂತೆ ಕೊರಳನ್ನು ಸರಿಪಡಿಸಿಕೊಂಡು— ಹೋಗೋಣವೆ? ಎಂದಳು.

—ಹೂ! ಏನು ವಿಚಾರಿಸುತ್ತಿದ್ದಿ?

—ಅಲ್ಲ, ಆ ಆಕಳು ಹೀಗೇಕೆ ನಮ್ಮನ್ನು ನೋಡುವದು?

ದನಗಾಹಿಯು ಹತ್ತರ ಒಂದು ಒಂದು ಮನೆಯಲ್ಲಿ ಅವುಗಳನ್ನು ಕುಂಡಿಸನು. ತುಂಬುವ ಮುಂದೆ ಆ ಮುದಿ ಆಕಳು ನಂದಿನಿಯ ಮುಖವನ್ನು ನೋಡುತ್ತ ಅರ್ಥಮರ್ಥ "ಅಂಬಾ" ಎಂದು ಒದರಿತು.

--ಏನಂದೆ? ನಂದಕನು ಪುನಃ ಕೇಳಿದನು.

—ಆಕಳು ಹೀಗೇಕೆ ನೋಡಿತು?

—ಆ ಮುದಿ ಆಕಳೇ?

—ಅಹುದು. ನಂದಿನಿಯನ್ನು ಇರಿಯಬೇಕೆಂದಿದ್ದಿತೊ, ಏನೊ? ನನಗೆ ತಿಳಿಯದು.

—ಒಂದು ಕಾರಣವಿದೆ.

—ಏನು?

—ನಂದಿನಿಯು ನಿನ್ನ ಬಾಲ ರೂಪ. ಅಹುದೆ?

—ಇದೇನು? ಹ....ಹ.... ಅಹುದು.

—ಮಗಳ ಮೇಲಿನ ಮಮತೆಯಿಂದ ಹಾಗೆ ನೋಡಿರಬೇಕು.

—ಮಗಳು?

ನಂದಕನು ಗಟ್ಟಿಯಾಗಿ ನಗಹತ್ತಿದನು. ಸುಕನ್ಯಾ ಅವಾಕ್ಕಾದಳು. ಗಂಡನ ನಗೆಯು ತೆರೆತೆರೆಯಾಗಿ ಹಾಗೇ ಸಾಗಿತು.

—ಮಗಳು! ಯಾರು? ಮಾತಿನಲ್ಲಿ ದಿಗ್ಭ್ರಮೆ ತುಂಬಿದ್ದಿತು.

—ನೀನು! ಸರಳವಾಗಿ ಹೇಳಿದನು.

ಸುಕನ್ಯಾಗೆ ಆಶ್ಚರ್ಯವಾಯಿತು.

—ನಿಮ್ಮ ಮಾತು ನನಗೆ ತಿಳಿಯದು. ಸ್ಪಷ್ಟವಾಗಿ ಹೇಳಿರಿ. ಎಂದು ಅಂಗಲಾಚಿದಳು,

—ಮನೆಗೆ ನಡೆ. ದಾರಿಗುಂಟ ಆ ಮಾತೇಕೆ?

ದಾರಿಗುಂಟ ಸುಕನ್ಯಾನ ತಲೆಯಲ್ಲಿ ಇಲ್ಲದ ಗೊಂದಲ. ನಾನು ಅದರ ಮಗಳೇ? ಥೀ! ಇಲ್ಲದ ಜೇಷ್ಟೆ.

—ಇಂಥ ಚೇಷ್ಟೆ ನಿಮಗೆ ಒಗ್ಗದು. ಎಂದು ದಾರಿಯನ್ನು ತುಳಿಯುತ್ತ ಅಂದೇ ಬಿಟ್ಟಳು.

—ಚೇಷ್ಟೆಯೆಂದು ತಿಳಿದಿಯಾ?

—ಅಲ್ಲದೇನು!

—ಮನೆಯು ಇನ್ನೆಷ್ಟು ದೂರ ಉಳಿಯಿತು?

—ಬಂದಿತು.

ಒಳಗೆ ಹೋದರು. ಸುಕನ್ಯಾನಿಗೆ ಸ್ಪಷ್ಟಪಡಿಸಿಕೊಳ್ಳಬೇಕೆಂದು ಹಂಬಲ. ನಂದಕನು ಆಗಲಿ. ಹೇಳುವೆ ಎಂದು ಮುಂದೆ ಹಾಕಹತ್ತಿದನು.

ಕಡೆಗೆ ಊಟವಾಯಿತು. ನಂದಿನಿಯು ಮಲಗಿಬಿಟ್ಟಳು. ನಂದಕನು ಪುಸ್ತಕವನ್ನು ಬಿಚ್ಚಿ ಹಾಸಿಗೆಯ ಮೇಲೆ ಓದುತ್ತ ಕುಳಿತನು. ಸುಕನ್ಯಾ ಬೇಗ ಕೆಲಸವನ್ನು ತೀರಿಸಿ ಬಂದಳು.

—ನಾನು ಅದರ ಮಗಳು ಹೇಗೆ? ಕೇಳಿದಳು.

—ಅಯ್ಯೋ, ಹುಚ್ಚಿ, ಮಲಗಬಾರದೇ! ಅದನ್ನೆಲ್ಲ ತೆಗೆದುಕೊಂಡು ಏನು ಮಾಡುವಿ?

—ಹಾಗಾದರೆ ಚೇಷ್ಟೆಯೇ?

—ಚೇಷ್ಟೆಯಲ್ಲ. ಸತ್ಯ.

—ಹೇಳಿರಿ. ಅನೇಕ ಬಗೆಯಾಗಿ ಆಗ್ರಹ ಮಾಡಿದಳು. ಕಡೆಗೆ ನಂದಕನು ಹೇಳಬೇಕಾಯಿತು.

—ಹ. ನೀನು ಕೋದಂಡರಾಮನಿಗೆ (ನನ್ನ ಮಾವಂದಿರು) ಹುಟ್ಟಿ ಎಂಟು ದಿನದಲ್ಲಿ ತಾಯಿಯನ್ನು ಕಳೆದುಕೊಂಡೆ. ಕೇಳಿಬಲ್ಲೆಯಾ?

—ಹೂ.

—ಎಂಟು ದಿನದ ಎಳೆ ಗೂಸನ್ನು ಸಾಕಲು ಅವರಿಗೆ ಅತೀವ ಕಷ್ಟವಾಯಿತು. ಆಗ ಮನೆಯಲ್ಲಿ ಇದೇ ಆಕಳು ಈದು ತಿಂಗಳಾಗಿದ್ದಿತು. ಇದರ ಮೊಲೆ ಹಾಲಿನ ಮೇಲೆ ನಿನ್ನ ಉಪಜೀವನವಾಗಿದೆ. ಆಕಳು ನಿನಗೆ ಮೊಲೆಯುಣಿಸದಿದ್ದರೆ ನೀನು ಎಂದೋ ಸತ್ತುಹೋಗುತ್ತಿದ್ದೆ. ನಂದಿನಿ (ಆಕಳ ಹೆಸರು) ಆಕಳಾದರೂ ಬಹಳ ಸಭ್ಯ. ಅಡವಿಯಿಂದ ಮನೆಗೆ ಬಂತೆಂದರೆ ಅಂಬಾ ಎಂದು ಒದರಿ ನಿನ್ನನ್ನು ಕಣ್ಣು ತುಂಬ ನೋಡಿದ ಮೇಲೆಯೇ ಸಂತೋಷ. ನಿನ್ನ ಅಳು ಕೇಳಿ ಅದು ಮೂರು ಸಾರೆ ಕಟ್ಟಿದ ಕಣ್ಣಿಯನ್ನು ಹರಿದುಕೊಂಡ ಸಂಗತಿಯು ನಿನ್ನ ಜ್ಞಾಪಕದಲ್ಲಿರಲಿಕ್ಕಿಲ್ಲ. ಹಾಲು ಕರೆಯುವ ಮೊದಲು ನೀನು ಮೊಲೆ ಹಿಡಿದು ಬಿಟ್ಟಿಯೆಂದರೆ ಹಿಂಡಿಕೊಳ್ಳಲಿಕ್ಕೆ ಅಪ್ಪಣೆ. ನೀನು ನಾಲ್ಕಾರು ವರ್ಷದ ವರೆಗೆ ಅದರ ಕರುವಿನಂತೆ ಕಂಡುಬಂದಿರುವೆ. ನಿನ್ನನ್ನು ಅದು ಅನೇಕ ಸಲ ಮೂಸಿದ್ದುಂಟು. ನೆಕ್ಕಿದ್ದುಂಟು. ಹಾಲನ್ನು ದಿನವೂ ಕುಡಿಸಿದ್ದುಂಟು. ನೀನಾದರೂ ತಾಯಿಯಂತೆ ಕಂಡಿರುವೆ, ಹುಲ್ಲು ಹಾಕಿರುವೆ. ಹಿಂಡಿ ಇಟ್ಟಿರುವೆ. ಹೊಟ್ಟು ಕೊಟ್ಟಿರುವೆ. ಮೈ ತೊಳೆದಿರುವೆ. ಮೇಲೆ ಹೆಚ್ಚುಗರು ವಿನಂತೆ ಬಾಯಲ್ಲಿ ಮೊಲೆ ಹಿಡಿದು ಹಾಲು ಕುಡಿದಿರುವೆ. ನಿನ್ನನ್ನು ಹಡೆದ ತಾಯಿಯು ಇದಕ್ಕೂ ಹೆಚ್ಚಾಗಿ ಆ ವಯಸ್ಸಿನಲ್ಲಿ ಏನು ಮಾಡಬಹುದಿದ್ದಿತು.!.... ತಾಯಿಯಲ್ಲವೇ? ಅದಕ್ಕೆ ನೋಡಿರಬೇಕು. ನಿಮ್ಮ ತಂದೆಯು ಒಕ್ಕಲಿಗನು ಈ ವರುಷ ಹುಲ್ಲಿನ ಅಭಾವದ ಮೂಲಕ ಕಟುಕರಿಗೆ ಅಲ್ಪ ಬೆಲೆಗೆ ಮಾರಿದನಂತೆ.

—ಕಟುಕರಿಗೆ ಮಾರಿದರೇ!

—ಇರಲಿ, ರಾತ್ರಿ ಬಹಳವಾಯಿತು ಮಲಗು. ನಂದಕನು ಮಲಗಿ ಬಿಟ್ಟನು.

ಸುಕನ್ಯಾನ ಸ್ಮೃತಿಪಟಲದ ಮೇಲೆ ನೂರಾರು ಅಸ್ಪಷ್ಟ ಚಿತ್ರಗಳು ಮೂಡಿ ನಿಂತವು. ಗಂಡ—ನಿನ್ನ ತಾಯಿ ಎಂದ ಮಾತು ರುದ್ರ ಭೂಮಿಯಂತೆ ಭಯಾನಕವೆನಿಸಹತ್ತಿತು. ತಾನು ಚಿಕ್ಕಂದಿನಲ್ಲಿ ಒಂದು ಆಕಳನ್ನು ಪ್ರೀತಿಸುತ್ತಿದ್ದು, ಅದರ ಹಾಲಿಗಾಗಿ ಆತುರ ಪಟ್ಟುದು. ತಾಯಿಯಂತೆ ಕಂಡುದು. ಒಂದೊಂದಾಗಿ ನೆನಪಿಗೆ ಬಂದವು. ನಂದಕನ ಮನೆಗೆ ಬಂದಮೇಲೆ ಅವೆಲ್ಲ ಹಳ್ಳಿಯ ಹುಡುಗಿಯ ಹುಚ್ಚಾಟಗಳನ್ನು ಮರೆತಿದ್ದಳು. ಈಗ ಹೆದರಿಕೊಂಡು ಸ್ಮೃತಿಯ ರಂಗಕ್ಕೆ ತರಹತ್ತಿದಳು.

ಅಹುದು. ನಂದಿನಿಯೇ ಅಹುದು. ತನ್ನ ಮಗಳಿಗೆ ಗಂಡನು ನಂದಿನಿಯೆಂದು ಅರಿಸಿಟ್ಟ ಹೆಸರೂ ಇದೇ ಆಗಿರಬೇಕು. ಈಗ ಆ ತಾಯಿಯು ಕಟುಕರ ಕೈಗೆ ಸಿಕ್ಕಿರುವಳು. ಹಾಲು ಕೊಡುವ ವರೆಗೆ ಅಕ್ಕರೆಯಿಂದ ಕಾಪಾಡಿದೆವು. ಈಗ ಮುದಿ ಆಕಳು! ಕಟುಕರಿಗೆ ಎರಡು ಸೇರು ಮಾಂಸಕ್ಕಾಗಿ ಮಾರಿದೆವು, ತನ್ನ ಕೃತಘ್ನತೆಗೆ ಸಾವಿರ ಬಾರಿ ಹಳಿದುಕೊಂಡಳು. ಶಪಿಸಿಕೊಂಡಳು. ಸಂಜೆಗೆ ಆ ಬೈಲಲ್ಲಿ ಆಕಳನ್ನು ಹೆದರಿಸಲು ಕಲ್ಲೆತ್ತಿದ ಕೈಯನ್ನು ಹಿಂಡಿಕೊಂಡಳು. ನೆಲಕ್ಕೆ ಅಪ್ಪಳಿಸಿದಳು.... ಹೀಗೆ ಒಂದಲ್ಲ ತಂಡ ತಂಡಾಗಿ ಬಂದ ವಿಚಾರ ಸರಣಿಯಿಂದ ತಲೆಯಿಂದ ಕಿಡಿಗಳು ಹಾರಹತ್ತಿದಂತೆ ಕಂಡಿತು. ಉದ್ದವಾಗಿ ಉಸಿರುಗರೆಯುತ್ತ ಮೂಲೆಯಿಂದ ಮೂಲೆಗೆ ಶತಪಥ. ಹಾಕಹತ್ತಿದಳು. "ಅಹುದು. ಅದನ್ನು ನಾನು ಬದುಕಿಸಬೇಕು. ಅದು ನನ್ನ ಧರ್ಮ" ಗಟ್ಟಿಯಾಗಿ ನುಡಿದಳು.

ನಂದಕನಿಗೆ ಥಟ್ಟನೆ ಎಚ್ಚರಾಯಿತು. ಸುಕನ್ಯಾ ಹುಚ್ಚಿಯಂತೆ ಶತಪಥ ಹಾಕಹತ್ತಿರುವಳು. ಬಾಯಿಂದ ಅಸ್ಪಷ್ಟ ಮಾತು. ಗಾಬರಿಯಿಂದಲೂ ಒಂದಿಷ್ಟು ಆಶ್ಚರ್ಯದಿಂದಲೂ ಏನದು ಸುಕನ್ಯಾ? ಎಂದನು.

—ಒಂದು ಮಾತು. ನೀವು ಆ ಆಕಳನ್ನು ಮನೆಗೆ ತರಬೇಕು. ಕಂಪಿಸುತ್ತ ನುಡಿದಳು.

—ಯಾಕೆ?

—ಅವಳು ನನ್ನ ತಾಯಿ.

—ಇದೆಂಥಹ ಹುಚ್ಚು ವಿಚಾರ.

—ಹಾಗೆ ನುಡಿಯಬೇಡಿರಿ. ಅವಳು ನನ್ನ ತಾಯಿ. ನೂರು ಸಂಕಟಗಳನ್ನು ಮರೆತು ನಿಮ್ಮ ಮನೆಯಲ್ಲಿ ನಾನು ಇಂದು ಆನಂದದಿಂದಿರುವೆ. ದೇವರು ನಿಮಗೆ ಒಂದಲ್ಲ ಹತ್ತು ಜನರನ್ನು ಇಪ್ಪತ್ತು ಪಶುಗಳನ್ನು ಸಾಕಿ-ಸಲಹುವಷ್ಟು ಶಕ್ತಿಯನ್ನು ಕೊಟ್ಟಿರುವನು. ನನ್ನಿಂದ ನಿಮ್ಮ ವೈಭವಕ್ಕೆ ನಿನ ವರ್ಣನೆಯಾಗಬೇಕೆಂದು ಹೀಗೆ ಹೇಳುತ್ತಿಲ್ಲ.

—ಸುಕನ್ಯಾ, ಅದು ಮುದಿ ಆಕಳು. ಅದರಿಂದ ಪ್ರಯೋಜನವೇನು?

—ಅಹುದು ಪ್ರಯೋಜನವಿಲ್ಲ. ಆದರೆ ಅವಳು ನನ್ನ ತಾಯಿ. ಕೊನೆಯ ದಿನ ಕಟುಕರ ಕೈಯೂರಿಗೆ ಅವಳ ಕತ್ತು ಬೀಳದಿರಲೆಂದು ನಾನು ಆಶಿಸುವೆ. ಆ ಮುದಿ ಆಕಳು ಎರಡು ದಿನ ನಿಮ್ಮ ಮನೆಯ ಹುಲ್ಲು ತಿನ್ನಲಿ. ಅದು ನಮ್ಮ ಮನೆಯಲ್ಲಿ ಬಿದ್ದು ಸಾಯಲಿ. ನನ್ನ ಕಣ್ಣು ಮುಂದೆ ಸಾಯಲಿ. ಇದರಿಂದ ಯಾರಿಗೂ ಹಾನಿಯಿಲ್ಲ.

( ೧೬ನೇ ಪುಟ ನೋಡಿರಿ )